CPMG / KA / BG-GPO/13/2003-2005




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಡಿಸೆಂಬರ್ ೨೫, ೨೦೦೩ (ಪುಷ್ಯ ೪, ಶಕ ವರ್ಷ ೧೯೨೫) | ಸಂಚಿಕೆ ೫೧ |
|---|---|---|


## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಪೊಲೀಸ್ ಅಧೀಕ್ಷಕರವರ ಕಛೇರಿ, ಶಿವಮೊಗ್ಗ ಜಿಲ್ಲೆ**

**ಅಧಿಸೂಚನೆ**

**ಸಂಖ್ಯೆ: ಎಂ.ಟಿ. ಲೆಕ್ಕ: 7:219:03-04, ದಿನಾಂಕ:7ನೇ ಡಿಸೆಂಬರ್ 2003**

**ವಿಷಯ:** ಶಿವಮೊಗ್ಗ ಜಿಲ್ಲೆಯ ಪೊಲೀಸ್ ಘಟಕದಲ್ಲಿ ದುರಸ್ಥಿಯಾಗದ ಹಾಗೂ ದುರಸ್ತಿ ಮಾಡಲಾಗದ ನಿಷ್ಪ್ರಯೋಜಿತಗೊಳಿಸಿದ ಪೊಲೀಸ್ ವಾಹನಗಳನ್ನು ಟೆಂಡರ್‌ನ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ6:ಟಿಸಿ ಇ 87 ದಿನಾಂಕ:15.12.92.

2. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಆದೇಶ ಸಂಖ್ಯೆ:ವಾಸಾ1: 55:03-04 ದಿನಾಂಕ:18:24.11.2003.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಶಿವಮೊಗ್ಗ, ಈ ಕಛೇರಿಯ ಮುಂಭಾಗದಲ್ಲಿ ಯಥಾಸ್ಥಿತಿಯಲ್ಲಿರುವ ಈ ಕೆಳಕಂಡ ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು (ಟೆಂಡರ್ ಕಂ ಆಕ್ಷನ್) ಮೂಲಕ ಶಿವಮೊಗ್ಗ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿಯ ಆವರಣದಲ್ಲಿ ದಿನಾಂಕ: 28.01.2004 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಮಾರಾಟ ಮಾಡಲಾಗುವುದು.

| ಕ್ರಮ ಸಂಖ್ಯೆ | ವಾಹನದ ರಿಜಿಸ್ಟ್ರೇಷನ್ ಸಂಖ್ಯೆ | ಮಾಡೆಲ್ | ಖರೀದಿಸಿದ ವರ್ಷ |
|---|---|---|---|
| 1. | ಎಂಇಎಸ್: 2621 | ವಿಲ್ಲೀಸ್ ಪೆಟ್ರೋಲ್ ಜೀಪು | 1969 |
| 2. | ಸಿಎಜಿ:7595 | ಡೀಸೆಲ್ ಜೀಪು | 1984 |
| 3. | ಸಿಎಜಿ:7583 | ಡೀಸೆಲ್ ಜೀಪು | 1983 |
| 4. | ಸಿಎಜಿ:7591 | ಡೀಸೆಲ್ ಜೀಪು | 1983 |
| 5. | ಸಿಎಜಿ:7484 | ಮೆಟಡೋರ್ ವ್ಯಾನು | 1982 |
| 6. | ಸಿಎಜಿ:416 | ಮೆಟಡೋರ್ ವ್ಯಾನು | 1982 |
| 7. | ಎಂಇಎಸ್ 2252 | ವಿಲ್ಲೀಸ್ ಜೀಪು | 1976 |

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ (ಸೀಲ್ಡ್ ಟೆಂಡರ್) ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ವಾಹನ ಸಂಖ್ಯೆ ಖರೀದಿಸುವ ಬಗ್ಗೆ ಎಂಬುದನ್ನು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.

2. ಪ್ರತಿಯೊಬ್ಬ ಸವಾಲುದಾರನು ಪ್ರತೀ ವಾಹನಕ್ಕೆ ರೂ. 3000-00 (ಮೂರು ಸಾವಿರ ಮಾತ್ರ) ಠೇವಣಿ ಹಣವನ್ನು ಡಿ.ಡಿ. ನಗದು ಮೂಲಕ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಹೆಸರಿನಲ್ಲಿ ಅರ್ಜಿಯ ಜೊತೆ ನೀಡತಕ್ಕದ್ದು. ಠೇವಣಿ ಹಣಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಹಣವಿಲ್ಲದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಠೇವಣಿ ಇಲ್ಲದೆ ಕಳುಹಿಸಲಾದ ಅರ್ಜಿಯನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ಅತೀ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ:23.01.2004ರ 4.00 ಗಂಟೆಯೊಳಗಾಗಿ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.
6. ಟೆಂಡರ್‌ದಾರರು ಸಹ ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸಬಹುದು.
7. ಜಿಲ್ಲಾ ಪೊಲೀಸ್ ಅಧೀಕ್ಷಕರುಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರುದಾರರು ಅಥವಾ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರುಗಳನ್ನು ಜಿಲ್ಲಾ ಪೊಲೀಸ್ ಅಧಿಕಾರಿಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಸಾರ್ವಜನಿಕರ ಸಮಕ್ಷಮ ತೆರೆದು ಬಹಿರಂಗಪಡಿಸುವರು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ, ಅವರನ್ನು ಯಶಸ್ವಿ ಟೆಂಡರ್ ಸವಾಲುದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರುದಾರರು: ಸವಾಲುದಾರರು ವಾಹನಗಳ ಒಟ್ಟು ಬೆಲೆಯ ಶೇಕಡ 25 ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು ರವರು ಸದರೀ ಹರಾಜನ್ನು ಒಪ್ಪಿದ ನಂತರವೇ ಸಂಪೂರ್ಣ ಹಣ ಪಾವತಿ ಮಾಡಿ ತಮ್ಮ ಸ್ವಂತ ಖರ್ಚಿನಿಂದ ಹಾಗೂ 7 ದಿನಗಳೊಳಗಾಗಿ ವಾಹನಗಳನ್ನು ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಈಗಾಗಲೇ ಅವರು ತುಂಬಿರುವ ಶೇಕಡ 25ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆ ಹೊರಡಿಸಿ ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಸರ್ಕಾರಕ್ಕೆ ಏನಾದರೂ ನಷ್ಟವಾದಲ್ಲಿ, ಅಂದರೆ ಮೊದಲನೆಯ ಹರಾಜಿಗಿಂತ ಕಡಿಮೆಯಾದರೆ ಆ ನಷ್ಟವನ್ನು ಸದರಿಯವರಿಂದಲೇ ವಸೂಲಿ ಮಾಡಲಾಗುವುದು.
10. ಎಲ್ಲಾ ಹಣವನ್ನು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳ ಮೂಲಕ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್‌ದಾರರ: ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಹಿಂದಿರುಗಿಸಲಾಗುವುದು.
12. ಮಾರಾಟ ತೆರಿಗೆಯನ್ನು ಚಲಾವಣೆಯಲ್ಲಿದ್ದ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲಿ ಮಾಡಲಾಗುವುದು.
13. ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ, ಜಿಲ್ಲಾ ಪೊಲೀಸ್ ಅಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆ.
14. ಹರಾಜಿನಲ್ಲಿ ಯಾವುದೇ ಸವಾಲನ್ನು: ಟೆಂಡರನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರು ಹೊಂದಿರುತ್ತಾರೆ. ಇದರ ಮೇಲೆ ಯಾರ ಅಧಿಕಾರ ಇರುವುದಿಲ್ಲ. ಇವರ ನಿರ್ಣಯವೇ ಅಂತಿಮವಾದದ್ದು.
15. ಇಚ್ಛೆಯುಳ್ಳ ಟೆಂಡರ್‌ದಾರರು ಮತ್ತು ಸವಾಲುದಾರರು ಹರಾಜು ಮಾಡಲಿಚ್ಛಿಸಿರುವ ನಿರುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಶಿವಮೊಗ್ಗ ಇವರ ಕಛೇರಿಯ ವೇಳೆಯಲ್ಲಿ ನೋಡಬಹುದು.
16. ಟೆಂಡರ್‌ದಾರರು ವಾಹನಗಳಿಗೆ ಅತೀ ಹೆಚ್ಚಿನ ಬೆಲೆಯನ್ನು ಅನುಬಂಧದಲ್ಲಿ ಕಾಣಿಸಿದ ನಮೂನೆಯಲ್ಲಿ ತೋರಿಸಬೇಕು.

ಪೊಲೀಸ್ ಅಧೀಕ್ಷಕರು,
ಪಿ.ಆರ್. 791 ಶಿವಮೊಗ್ಗ ಜಿಲ್ಲೆ.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೋಲಾರ ಅರಣ್ಯ ವಿಭಾಗ, ಕೋಲಾರ**

**ಟೆಂಡರ್-ಕಂ-ಹರಾಜು ಪ್ರಕಟಣೆ**

**ಸಂಖ್ಯೆ:ಎ7:ಎಸ್‌ಎಎಸ್:ಸಿಆರ್:89/2001-02, ದಿನಾಂಕ:7ನೇ ಡಿಸೆಂಬರ್, 2003**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕೋಲಾರ ಅರಣ್ಯ ವಿಭಾಗದವತಿಯಿಂದ ಮುಳಬಾಗಿಲು ತಾಲ್ಲೂಕು ನಂಗಲಿ ದೊಡ್ಡಕೆರೆ ಅಂಗಳದಲ್ಲಿ ಬೆಳೆಸಲಾದ ಹಾಗೂ ಕಕ್ರಾವಣೆಗೆ ಸಿದ್ದವಾಗಿರುವ ನಿಂತ ನೀಲಗಿರಿ ಮರಗಳನ್ನು ಅರಣ್ಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಅವರ ಕಛೇರಿಯಲ್ಲಿ ದಿನಾಂಕ:07.01.2004ರಂದು 3.00 ಗಂಟೆಗೆ ಟೆಂಡರ್-ಕಂ-ಹರಾಜು ಮಾಡಲಾಗುವುದು. ಹೆಚ್ಚಿನ ವಿವರಗಳಿಗೆ ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸತಕ್ಕದ್ದು.

**ಹರಾಜಿನಲ್ಲಿಟ್ಟಿರುವ ಮರಗಳ ವಿವರಗಳು**

| ಕ್ರ. ಸಂ. | ಸಾಮಗ್ರಿಯ ಹೆಸರು |
|---|---|
| 1. | ಮುಳಬಾಗಿಲು ವಲಯಕ್ಕೆ ಸೇರಿದ ನಂಗಲಿ ದೊಡ್ಡಕೆರೆ ಅಂಗಳದಲ್ಲಿ ಬೆಳೆಸಿರುವ 1528 ನೀಲಗಿರಿ ಮರಗಳು |

**:ಷರತ್ತುಗಳು:**

1. ಬಿಡ್ ಮಾಡಲು ಇಷ್ಟವುಳ್ಳವರು ಹರಾಜು ಪ್ರಾರಂಭವಾಗುವ ಮೊದಲು ಪ್ರತಿಯೊಬ್ಬರೂ ರೂ. 30000.00 ಠೇವಣಿ ಕಟ್ಟತಕ್ಕದ್ದು.
2. ಹರಾಜು ಮುಗಿದ ಕೂಡಲೇ ಮಾರಾಟ ಬೆಲೆಯ ಶೇಕಡಾ 50% ರಷ್ಟು ಹಣ ಮತ್ತು ಪೂರ್ತಿ ತೆರಿಗೆಗಳನ್ನು ಹರಾಜು ನಡೆದ ಸ್ಥಳದಲ್ಲಿಯೇ ಪಾವತಿಸಿ ರಸೀದಿ ಪಡೆಯತಕ್ಕದ್ದು. ಉಳಿಕೆಗೆ ಶೇ. 50% ರಷ್ಟು ಹಣವನ್ನು ಹಣ ದೃಢೀಕರಿಸಿದ ಮೇಲೆ ಕರಾರು ಮಾಡುವ ಸಮಯದಲ್ಲಿ ಪಾವತಿಸಿ ಕೆಲಸದ ಆದೇಶ ಪಡೆಯುವುದು.
3. ಹರಾಜನ್ನು ಅನುಮೋದಿಸುವ ಅಥವಾ ತಿರಸ್ಕರಿಸುವ ಹಕ್ಕು ಅರಣ್ಯ ಇಲಾಖೆ ಪ್ರಾಧಿಕಾರವುಳ್ಳ ಅಧಿಕಾರಿಗಳವರ ವ್ಯಾಪ್ತಿಯಲ್ಲಿರುತ್ತದೆ.
4. ಹರಾಜು ಅಂಗೀಕಾರವಾದ ಒಂದು ತಿಂಗಳ ಅವಧಿಯಲ್ಲಿ ಮರಗಳನ್ನು ಕಡಿದು ಸಾಗಿಸಿಕೊಳ್ಳತಕ್ಕದ್ದು, ತಪ್ಪಿದಲ್ಲಿ ನಷ್ಟಗಳಿಗೆ ಸವಾಲುದಾರರು ಜವಾಬ್ದಾರರಾಗಿರುತ್ತಾರೆ.
5. ಮರಗಳನ್ನು ಸೂಕ್ತ ರಹದಾರಿಯೊಂದಿಗೆ ಸಾಗಾಣಿಕೆ ಮಾಡಿಕೊಳ್ಳತಕ್ಕದ್ದು.
6. ನಿಗದಿತ ವೇಳೆಯಲ್ಲಿ ಹಣ ಪಾವತಿಸದಿದ್ದಲ್ಲಿ ಮೊದಲು ಪಾವತಿಸಿರುವ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸವಾಲುದಾರರ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು. ಇದರಿಂದ ಸರ್ಕಾರಕ್ಕೆ ಆಗುವ ನಷ್ಟವನ್ನು ಮೊದಲನೇ ಹರಾಜುದಾರರಿಂದ ಕಾನೂನು ರೀತ್ಯಾ ವಸೂಲಿ ಮಾಡಲಾಗುವುದು.
7. ಹರಾಜಿನಲ್ಲಿ ಭಾಗವಹಿಸುವ ಮೊದಲೇ ಬಿಡ್‌ದಾರರು ನೆಡುತೋಪುಗಳನ್ನು ಖುದ್ದಾಗಿ ಪರಿಶೀಲಿಸಿ ಅದರ ಬೆಲೆಯನ್ನು ನೀಡತಕ್ಕದ್ದು.
8. ಟೆಂಡರ್ ಫಾರಂಗಳನ್ನು ದಿನಾಂಕ: 05.01.2004 ಮತ್ತು 06.01.2004ರಂದು ಕೆಲಸದ ವೇಳೆಯಲ್ಲಿ ಕೊಡಲಾಗುವುದು. ಒಂದು ಟೆಂಡರ್ ಫಾರಂ ಬೆಲೆ ರೂ. 200-00ಗಳ ನ್ಯಾಯಾಲಯದ 2.00 ರೂ. ಸ್ಟ್ಯಾಂಪನ್ನು ಲಗತ್ತಿಸಬೇಕು.
9. ಮೊಹರಾದ ಟೆಂಡರ್ ನಮೂನೆಗಳನ್ನು ದಿನಾಂಕ: 07.01.2004 ರಂದು 1.00 ಗಂಟೆಯವರೆಗೆ ಸಲ್ಲಿಸಬಹುದಾಗಿದೆ.
10. ಹರಾಜು ಮಾಡುವ ಮರಗಳ ವಿವರಗಳನ್ನು ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಯವರಿಂದ ಪಡೆದುಕೊಳ್ಳಬಹುದು.
11. ಹರಾಜಿಗಾಗಿ ಪ್ರಕಟಣೆಗೊಂಡಿರುವ ಮರಗಳ ಸಂಖ್ಯೆಯಾಗಲೀ ಅಥವಾ ಪರಿಮಾಣದಲ್ಲಾಗಲೀ ವ್ಯತ್ಯಾಸ ಕಂಡು ಬಂದ ಪಕ್ಷದಲ್ಲಿ ಈ ಇಲಾಖೆ ಜವಾಬ್ದಾರಿಯಿರುವುದಿಲ್ಲ. ಆದ್ದರಿಂದ ಬಿಡ್‌ದಾರರು ಹರಾಜಿನಲ್ಲಿಟ್ಟಿರುವ ಉತ್ಪನ್ನವನ್ನು ಹರಾಜಿಗೆ ಮುಂಚಿತವಾಗಿ ಪರೀಕ್ಷಿಸಿ ಖಾತ್ರಿ ಮಾಡಿಕೊಂಡು ಹರಾಜಿನಲ್ಲಿ ಭಾಗವಹಿಸತಕ್ಕದ್ದು. ಮರಗಳನ್ನು ಹೇಗಿದೆಯೋ ಹಾಗೆ ಅದೇ ಸ್ಥಿತಿಯಲ್ಲಿ ಮಾರಾಟ ಮಾಡಲಾಗುವುದು.
12. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 07.01.2004ರಂದು ಮಧ್ಯಾಹ್ನ 1.00 ಗಂಟೆಗೆ ಸೀಲಾರ ಪೆಟ್ಟಿಗೆಯಲ್ಲಿ ಡಿ.ಡಿ. ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಹೆಸರಿನಲ್ಲಿ ಪಡೆದು ಲಗತ್ತಿಸಿ ಹಾಕಬೇಕು. ಅದೇ ದಿನ 3.00 ಗಂಟೆಗೆ ಹರಾಜು ಮುಗಿದ ನಂತರ ತೆಗೆಯಲಾಗುವುದು.
13. ಹೆಚ್ಚಿನ ವಿವರಗಳನ್ನು ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.
14. ಹರಾಜಿನ ಮೊತ್ತಕ್ಕೆ ಶೇ. 12% ರಷ್ಟು ಎಫ್‌ಡಿಎ ಶೇ. 10% ರಷ್ಟು ಮಾರಾಟ ತೆರಿಗೆ ಆದಾಯ ತೆರಿಗೆ ಶೇ. 15% ರಷ್ಟು ಆದಾಯ ತೆರಿಗೆಯ ಮೇಲೆ ಶೇ. 5% ರಷ್ಟು ಸರ್‌ಚಾರ್ಜ್ ಮಾರಾಟ ತೆರಿಗೆಯ ಮೇಲೆ ಶೇ. 5% ರಷ್ಟು ಸರ್‌ಚಾರ್ಜ್.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕೋಲಾರ ವಿಭಾಗ,
ಕೋಲಾರ.

ಪಿ.ಆರ್. 793

**ಕಮಾಂಡೆಂಟ್‌ರವರ ಕಛೇರಿ, 1ನೇ ಪಡೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ನಂ.60, ರಿಚ್‌ಮಂಡ್ ರಸ್ತೆ, ಬೆಂಗಳೂರು**

**ಪ್ರಕಟಣೆ**

**ಸಂಖ್ಯೆ: ವಾಸಾವಿ:1:4250:2003-04, ದಿನಾಂಕ: 10ನೇ ಡಿಸೆಂಬರ್, 2003**

**ವಿಷಯ:** ಅನುಪಯುಕ್ತ ವಾಹನವನ್ನು ಸಾರ್ವಜನಿಕ ಟೆಂಡರ್ ಹಾಗೂ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

1ನೇ ಪಡೆ, ಕೆ.ಎಸ್.ಆರ್.ಪಿ. ಯ ಈ ಕೆಳಕಂಡ ಅನುಪಯುಕ್ತ ವಾಹನವನ್ನು ಟೆಂಡರ್ ಹಾಗೂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ: 09.01.2004 ರಂದು ಬೆಳಿಗ್ಗೆ 11.00 ಗಂಟೆಯವರೆಗೆ ಹರಾಜು ದಿನಾಂಕ: 12.01.2004 ರಂದು ಬೆಳಿಗ್ಗೆ 11.00 ಗಂಟೆಗೆ 1ನೇ ಪಡೆ, ಕೆ.ಎಸ್.ಆರ್.ಪಿ ವಾಹನ ವಿಭಾಗದ ಆವರಣದಲ್ಲಿ ನಡೆಸಲಾಗುವುದು. ಇ.ಎಂ.ಡಿ. ಹಣ ರೂ. 1000-00 (ರೂಪಾಯಿ ಒಂದು ಸಾವಿರ ಮಾತ್ರ).

| ಕ್ರಮ ಸಂಖ್ಯೆ | ವಾಹನ ಸಂಖ್ಯೆ | ಮಾದರಿ | ಉತ್ಪಾದನಾ ವರ್ಷ |
|---|---|---|---|
| 1. | ಎಂ.ಇ.ಎನ್. 4250 | ಕಾರು | 1977 ಮಾಡೆಲ್ |

ಕಮಾಂಡೆಂಟ್,
1ನೇ ಪಡೆ, ಕೆ.ಎಸ್.ಆರ್.ಪಿ.
ಬೆಂಗಳೂರು.

ಪಿ.ಆರ್. 794

**ಲೋಕೋಪಯೋಗಿ ಇಲಾಖೆ**
**ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ,**
**ಟೆಂಡರು ಪ್ರಕಟಣೆ**

**ನಂ.ಇಎನ್‌ಹೆಚ್/ಚಿ/ಸ.ಇ-2/ಟೆಂ.ಪ್ರ./ಎನ್‌ಹೆಚ್.13/ಜಂಕ್ಷನ್/ಕಿ.ಮೀ. 485.157/03-04/3274, ದಿನಾಂಕ: 11ನೇ ಡಿಸೆಂಬರ್, 2003**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೊಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಮೊಹರಾದ ಲಕೋಟೆಯನ್ನು ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: 24.01.2004 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ಟೆಂಡರನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರು ಕರೆ ಸಂಖ್ಯೆ ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿ ಪಡಿಸಿದ ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಡು (ಇಎಂಡಿ) (ಮೊತ್ತ ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ +ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1. | ರಾಷ್ಟ್ರೀಯ ಹೆದ್ದಾರಿ -13 ಸೊಲ್ಲಾಪುರ-ಮಂಗಳೂರು ಸೆಕ್ಷನ್ ಕಿ.ಮೀ. 485.157 ಯಲ್ಲಿ ಚನ್ನಗಿರಿ ಪಟ್ಟಣ ವ್ಯಾಪ್ತಿಯಲ್ಲಿರುವ ಜಂಕ್ಷನ್ ಅಭಿವೃದ್ಧಿ ಕಾಮಗಾರಿ. | ರೂ. 47.60 ಲಕ್ಷಗಳು | ರೂ. 47,600/- | 5,000+ 8% ಕೆ.ಎಸ್.ಟಿ.+ ಕೆ.ಎಸ್.ಟಿ.ಯ ಮೇಲೆ 10% ಸರ್‌ಚಾರ್ಜ್ | ಮೋರಿಗಳು, ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣದ ಕಾಮಗಾರಿ | 9 ತಿಂಗಳು (ಮಳೆಗಾಲ ಸಹಿತ) |

**ಷರತ್ತುಗಳು:**

1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಕಾರ್ಯನಿರ್ವಾಹಕ ಅಭಿಯಂತರರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆದಾರರ ನೊಂದಾವಣೆ ಪತ್ರದ ಪ್ರತಿ ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಇಲಾಖೆಯಿಂದ ಪಡೆದು ಸಲ್ಲಿಸತಕ್ಕದ್ದು. ಮತ್ತು ಗುತ್ತಿಗೆದಾರರು ಟೆಂಡರಿನಲ್ಲಿ ಕೇಳಿರುವ ಯಂತ್ರೋಪಕರಣಗಳ ಮಾಲೀಕತ್ವದ ಪುರಾವೆಯ ಜೆರಾಕ್ಸ್ ಪ್ರತಿಗಳನ್ನು ವಿಭಾಗ ಮಟ್ಟದ ಅಧಿಕಾರಿಗಳಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.

| | | | |
|---|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ: | : | 27.12.2003 (ಕಛೇರಿ ವೇಳೆಯಲ್ಲಿ) |
| ಆ) | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: | : | 16.01.2004 ರಿಂದ 19.01.2004 ರವರೆಗೆ (ಕಛೇರಿ ವೇಳೆಯಲ್ಲಿ) |
| ಇ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ: | : | 24.01.2004, ಮಧ್ಯಾಹ್ನ 4.00 ಗಂಟೆಯ ವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ) | ಟೆಂಡರ್‌ಗಳನ್ನು ತೆರೆಯುವ ದಿನಾಂಕ: | : | 27.01.2004, ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |

**ಟೆಂಡರ್‌ಗಳಿಗೆ ಷರತ್ತುಗಳು:**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ./ ಎಫ್.ಡಿ.ಆರ್./ ಪೇ ಆರ್ಡರ್/ ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ಅನ್ನು ಟೆಂಡರ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ. 66ದಕ್ಕೆ ಅನುಗುಣವಾಗಿರತಕ್ಕದ್ದು.
2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಮೂರು ವರ್ಷಗಳಾಗಿರುತ್ತವೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಮೂರು ವರ್ಷಗಳವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಮೂರು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು/ ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ/ ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ./ ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.
3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ಟೆಂಡರ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟ ದಾಖಲೆಗಳನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರಮ ಸಂಖ್ಯೆ | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 1. | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ. ಮತ್ತು ಹೆಚ್. ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | ಖರೀದಿಸಿದ ಇನ್‌ವಾಯ್ಸ್: ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 2. | ಪೇವರ್ ಫಿನೀಷರ್ ಸೆನ್ಸಾರ್‌ನೊಂದಿಗೆ | ಒಂದು (1) | -ಸದರಿ- |
| 3. | ವೈಬ್ರೇಟರಿ ರೋಲರ್ | ಒಂದು (1) | -ಸದರಿ- |
| 4. | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | -ಸದರಿ- |
| 5. | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | -ಸದರಿ- |
| 6. | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್. |
| 7. | ಎಕ್ಸ್‌ಕವೇಟರ್ | ಒಂದು (1) | ಮಾಲೀಕತ್ವದ ಪ್ರಮಾಣ ಪತ್ರ |
| 8. | ಕಾಂಕ್ರೀಟ್ ಮಿಕ್ಸರ್ | ಎರಡು (2) | ಖರೀದಿಸಿದ ಇನ್‌ವಾಯ್ಸ್:ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 9. | ವೈಬ್ರೇಟರ್ | ಎರಡು (2) | -ಸದರಿ- |

4. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ.
5. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್ ಅನ್ನು" ಕಡ್ಡಾಯವಾಗಿ ಟೆಂಡರ್ ಜೊತೆಯಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್ ಅನ್ನು" ಸಲ್ಲಿಸದಿದ್ದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ.
6. ಟೆಂಡರ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ಟೆಂಡರ್‌ಗಳನ್ನು ಅನರ್ಹಗೊಳಿಸಲಾಗುವುದು.

7. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ಟೆಂಡರಿನ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು: ಏಜೆನ್ಸಿಗಳು: ಸಂಸ್ಥೆಯ ಪ್ರೊಫೈಲ್‌ಅನ್ನು ಲಗತ್ತಿಸತಕ್ಕದ್ದು.
8. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
9. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
10. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
11. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಕೆ.ವಿ. ರುದ್ರಪ್ಪ**
ಕಾರ್ಯಪಾಲಕ ಅಭಿಯಂತರು,
ರಾ.ಹೆ. ವಿಭಾಗ, ಚಿತ್ರದುರ್ಗ.

ಪಿ.ಆರ್.796

**ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ವಿಭಾಗ, ಬಾಗಲಕೋಟೆ ಇವರ ಕಛೇರಿ**

**ಐಟಂವಾರು ಗುತ್ತಿಗೆ ಆಹ್ವಾನ ಪತ್ರಿಕೆ**

**ಸಂಖ್ಯೆ: ಲೋಇ:ಬಾವಿ:ರಸ್ತೆ:ಕಿಇಂ:2003-04/ 2511, ದಿನಾಂಕ: 8ನೇ ಡಿಸೆಂಬರ್, 2003**

ಕರ್ನಾಟಕ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯವರಿಂದ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಣಿ ಮಾಡಿಸಿದ ಅರ್ಹ ಗುತ್ತಿಗೆದಾರರಿಂದ ಕೆಳಗೆ ನಮೂದಿಸಿದ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ಗಳನ್ನು ದ್ವಿ ಪ್ರತಿಗಳಲ್ಲಿ ಕೆಲಸದ ಹೆಸರನ್ನು ನಮೂದಿಸಿ ಮೊಹರು ಬಂದ್ ಮಾಡಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಅನುಸೂಚಿತ ಅವಧಿ ಮತ್ತು ವೇಳೆಯಲ್ಲಿ ಸ್ವೀಕರಿಸಲಾಗುವುದು. ಅವುಗಳನ್ನು ಗುತ್ತಿಗೆದಾರರ ಅಥವಾ ಅವರ ಪ್ರತಿನಿಧಿಗಳ ಹಾಜರಾತಿಯಲ್ಲಿ ಅಂದೇ ಅಥವಾ ಮುಂದಿನ ಯಾವುದಾದರೂ ಕೆಲಸದ ಅವಧಿಯಲ್ಲಿ ತೆರೆಯಲಾಗುವುದು.

ಗುತ್ತಿಗೆದಾರರು ಟೆಂಡರ್‌ಗಳನ್ನು ಸಾಮಾನ್ಯ ನಿಯಮಗಳಲ್ಲಿ ಸೂಚಿಸಿದ ವಿವರಗಳನ್ನೊಳಗೊಂಡಿರುವಂತೆ, ಎಲ್ಲ ದಾಖಲೆಗಳನ್ನು ಅರ್ಜಿಯೊಂದಿಗೆ ನಿಗದಿತ ಅವಧಿಯಲ್ಲಿ ಸಲ್ಲಿಸಬೇಕು.

**ಟೆಂಡರಿಗಿಟ್ಟ ಕಾಮಗಾರಿ ವಿವರಣಾ ಪಟ್ಟಿ:**

| ಅ. ನಂ. | ಕೆಲಸದ ಹೆಸರು | ಟೆಂಡರಿಗಿಟ್ಟಿರುವ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ಟೆಂಡರ್ ನಿಯಮಾವಳಿಯಂತೆ ರೂಪಾಯಿ | ಟೆಂಡರ್ ಫಾರಂ ಬೆಲೆ ರೂ. (ಹಿಂದಿರುಗಿಸ ಲಾಗುವುದಿಲ್ಲ) | ಕೆಲಸವನ್ನು ಮುಗಿಸಲು ಕಾಲಮಿತಿ | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಲೆಕ್ಕಶೀರ್ಷಿಕೆ 3054 ರಸ್ತೆ ಮತ್ತು ಸೇತುವೆ (ಯೋಜನೇತರ) ಅಡಿಯಲ್ಲಿ ಬಾಗಲಕೋಟೆ ಜಿಲ್ಲೆಯ ಜಮಖಂಡಿ ಪಟ್ಟಣ ಪರಿಮಿತಿಯಲ್ಲಿ ಬರುವ ಅಂಬೇಡ್ಕರ್ ಸರ್ಕಲ್‌ನಿಂದ ದೇಸಾಯಿ ಸರ್ಕಲ್ ವರೆಗೆ ಕಿ.ಮೀ. 0.30 ರಿಂದ 1.60ರ ವರೆಗೆ (ಜಿಮುರ) ಹೊರವಲಯು ರಸ್ತೆ ಸುಧಾರಣೆ ಮಾಡುವುದು. | 12.50 | 18750.00 | 2320.00 ಟ್ಯಾಕ್ಸ್ ಸಹಿತ | 3 ತಿಂಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು |

**ಸಾಮಾನ್ಯ ವಿವರಣೆಗಳು:**

1. ಗುತ್ತಿಗೆದಾರರು ಇಂಥದೆ ಆದ ಕಾಮಗಾರಿಗಳನ್ನು ಪ್ರತಿ ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಮೊತ್ತದ ಕಾಮಗಾರಿಗಳನ್ನು ಹಿಂದಿನ 5 ಆರ್ಥಿಕ ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರ್ತಿಗೊಳಿಸಿರಬೇಕು. (ಕಾಮಗಾರಿ ಮೊತ್ತವನ್ನು ಕಾಮಗಾರಿ ಪೂರ್ತಿಗೊಂಡ ಆರ್ಥಿಕ ವರ್ಷದಿಂದ ಈ ವರ್ಷದವರೆಗೆ ಶೇಕಡಾ 10ರಂತೆ ಪ್ರತಿ ವರ್ಷಕ್ಕೆ ಲೆಕ್ಕ ಹಾಕುವುದು) ಅಲ್ಲದೆ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕಾಮಗಾರಿಯನ್ನು ಕೈಗೊಂಡಿದ್ದರೆ ಟೆಂಡರಿಗಿಟ್ಟ ಮೊತ್ತದ ಶೇಕಡಾ 30ರಷ್ಟು ಹಣ ಪಾವತಿ ಆಗಿರಬೇಕು.
2. ಕೆಲಸಕ್ಕೆ ಬೇಕಾದ ಎಲ್ಲ ಸಾಮಗ್ರಿಗಳನ್ನು ಗುತ್ತಿಗೆದಾರರೇ ತಂದು ನಿರ್ವಹಿಸಬೇಕು ಹಾಗೂ ಡಾಂಬರೀಕರಣ ಮಾಡುವಾಗ ಹಾಟ್‌ಮಿಕ್ಸ್ ಪ್ಲಾಂಟ್ ಹಾಗೂ ಪೇವರ್ ಫಿನಿಶರ್ ಉಪಯೋಗಿಸಬೇಕು. ಇಲಾಖೆ ವತಿಯಿಂದ ಯಾವುದೇ ರೀತಿ ಸಾಮಗ್ರಿಗಳನ್ನು ಪೂರೈಸಲಾಗುವುದಿಲ್ಲ. ಗುತ್ತಿಗೆದಾರರು ಪೂರೈಸುವ ಸಾಮಗ್ರಿಗಳನ್ನು ಸೂಚಿಸಿದ ಪರೀಕ್ಷಣಾ ಕೇಂದ್ರದಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಪರೀಕ್ಷಿಸಿಕೊಂಡು ಸಂಬಂಧಪಟ್ಟ ಅಧಿಕಾರಿಗಳಿಗೆ ಪ್ರಮಾಣ ಪತ್ರವನ್ನು ಸಲ್ಲಿಸಿ ಅನುಮತಿ ಪಡೆದುಕೊಂಡು ಸಾಮಗ್ರಿಗಳನ್ನು ಕೆಲಸಕ್ಕೆ ಉಪಯೋಗಿಸಬೇಕಾಗುತ್ತದೆ.

3. ಮೇಲೆ ನಮೂದಿಸಿದ ಕೆಲಸದ ಟೆಂಡರ್‌ಗಳಲ್ಲಿ ಭಾಗವಹಿಸಲಿಚ್ಛಿಸುವ ನಿಗದಿತ ಗುತ್ತಿಗೆದಾರರು ಟೆಂಡರ್ ಫಾರಂ ಬೆಲೆಯನ್ನು ನಗದು ರೂಪದಲ್ಲಿ ಅಥವಾ ಡಿಮ್ಯಾಂಡ್ ಡ್ರಾಫ್ಟ್‌ನ್ನು ಕಾರ್ಯನಿರ್ವಾಹಕ ಇಂಜಿನೀಯರರು ಲೋಕೋಪಯೋಗಿ ಇಲಾಖೆ ವಿಭಾಗ, ಬಾಗಲಕೋಟೆ, ಇವರ ಹೆಸರಿನಲ್ಲಿ ಪಡೆದು ಸಲ್ಲಿಸತಕ್ಕದ್ದು.
4. ಯಾವುದೇ ಅಥವಾ ಎಲ್ಲ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೆ ನಿರಾಕರಿಸುವ ಹಕ್ಕನ್ನು ಟೆಂಡರ್‌ಗಳನ್ನು ನಿರ್ಧರಿಸುವ ಅಧಿಕಾರಿಗಳು ಕಾಯ್ದಿರಿಸಿಕೊಂಡಿದ್ದಾರೆ.
5. ಗುತ್ತಿಗೆದಾರರು ಫೈನಾನ್ಸಿಯಲ್ ಬಿಡ್‌ನಲ್ಲಿ ಐಟಂವಾರು ದರಗಳನ್ನು ಅಂಕಿಯಲ್ಲಿ ಮತ್ತು ಅಕ್ಷರಗಳಲ್ಲಿ ತಪ್ಪದೇ ನಮೂದಿಸಬೇಕು ಮತ್ತು ಮೊಹರು ಮಾಡಿ ಸಲ್ಲಿಸಬೇಕು.
6. ಸದರಿ ಕೆಲಸದ ಟೆಂಡರಿಗೆ ನಮೂದಿಸಿದ ಮುಂಗಡ ಠೇವಣಿ ಹಣವನ್ನು 'ರಾಷ್ಟ್ರೀಕೃತ: ಶೆಡ್ಯೂಲ್ ಬ್ಯಾಂಕ್ ನಿಂದ ಡಿಮ್ಯಾಂಡ್ ಡ್ರಾಫ್ಟ್: ಕಾಲ್ ಡಿಪಾಜಿಟ್ ನಗದು ರಶೀದಿಯನ್ನು ಕಾರ್ಯನಿರ್ವಾಹಕ ಇಂಜಿನೀಯರರು ಲೋಇ ವಿಭಾಗ ಬಾಗಲಕೋಟೆ ಇವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆಗೆ ಲಗತ್ತಿಸಿ ಸಲ್ಲಿಸಬೇಕು. ಬ್ಯಾಂಕ್ ಗ್ಯಾರಂಟಿಯನ್ನು ತೆಗೆದುಕೊಂಡಲ್ಲಿ ನಿಗದಿತ ನಮೂನೆಯಲ್ಲಿ ಕೆಲಸದ ಹೆಸರು ನಮೂದಿಸಿ ಸಲ್ಲಿಸಬೇಕು. ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಸಲ್ಲಿಸ ಬಯಸುವವರು ಈ ಕೆಳಗೆ ಸಹಿ ಮಾಡಿದ ಅಧಿಕಾರಿಯವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿಸಿ ಲಗತ್ತಿಸಬೇಕು. ತಪ್ಪಿದಲ್ಲಿ ಅಂಥವರ ಗುತ್ತಿಗೆಯನ್ನು ತಿರಸ್ಕರಿಸಲಾಗುವುದು.
7. **ಟೆಂಡರ್ ಅವಧಿ ಈ ಕೆಳಗಿನಂತಿವೆ:**

| | | | |
|---|---|---|---|
| ಅ) | ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: | : | 29.12.2003 ರ ವರೆಗೆ ಮತ್ತು ಅದಕ್ಕಿಂತ ಮೊದಲು ಬೆಳಿಗ್ಗೆ 10.00 ಘಂಟೆಯಿಂದ 5.30 ಘಂಟೆವರೆಗೆ ಮಾತ್ರ. |
| ಬ) | ಖುಲ್ಲಾ ಟೆಂಡರ್ ಫಾರಂಗಳನ್ನು ಪೂರೈಸುವ ದಿನಾಂಕ | : | 02.01.2003 ರಂದು ಕಛೇರಿ ವೇಳೆಯಲ್ಲಿ ಮಾತ್ರ. |
| ಕ) | ಟೆಂಡರ್‌ಗಳನ್ನು ಸಲ್ಲಿಸುವ ದಿನಾಂಕ | : | 06.01.2004 ರಂದು ಸಾಯಂಕಾಲ 4.00 ಘಂಟೆವರೆಗೆ |
| ಡ) | ಟೆಂಡರ್‌ಗಳನ್ನು ತೆರೆಯುವ ದಿನಾಂಕ: | : | 06.01.2004 ರಂದು ಅಥವಾ ಮುಂದೆ ಯಾವುದಾದರೂ ಅನುಕೂಲಕರ ದಿನಾಂಕದಂದು ತೆರೆಯಲಾಗುವುದು. |

**ಟಿಪ್ಪಣಿ:** ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ದಿವಸವೆಂದು ಘೋಷಿಸಿದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

**ಡಿ.ಎನ್. ಮರೋಳ**
ಕಾರ್ಯನಿರ್ವಾಹಕ ಇಂಜಿನೀಯರರು,
(ಲೋಇ) ಬಾಗಲಕೋಟೆ ವಿಭಾಗ,
ಬಾಗಲಕೋಟೆ.

ಪಿ.ಆರ್.797

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

## ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 88:ಸಗ್ರಇ 2003, ಬೆಂಗಳೂರು, ದಿನಾಂಕ:10ನೇ ಡಿಸೆಂಬರ್, 2003**

ಸಚಿವಾಲಯ ಗ್ರಂಥಾಲಯ, ವಿಧಾನಸೌಧ ಮತ್ತು ಬಹುಮಹಡಿಗಳ ಕಟ್ಟಡ ಶಾಖೆಯೂ ಸೇರಿದಂತೆ ಹಳೆಯ ದಿನಪತ್ರಿಕೆ/ ನಿಯತಕಾಲಿಕೆ ಹಾಗೂ ನಿರುಪಯುಕ್ತ ಎಂದು ಪರಿಗಣಿಸಿ ರದ್ದುಗೊಳಿಸಿದ ಹಳೆಯ ಗ್ರಂಥಗಳ ವಿಲೇವಾರಿಗಾಗಿ ಅನುಭವಸ್ಥ ಗುತ್ತಿಗೆದಾರರಿಂದ ಒಂದು ವರ್ಷದ ಅವಧಿಗೆ ಅಂದರೆ 01.01.2004 ರಿಂದ 31.12.2004 ರವರೆಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಂತೆ ಟೆಂಡರನ್ನು ಆಹ್ವಾನಿಸಲಾಗಿದೆ. ಲಕೋಟೆಯ ಮೇಲೆ "ಹಳೆಯ ದಿನಪತ್ರಿಕೆ/ ನಿಯತಕಾಲಿಕೆ ವಿಲೇವಾರಿಗಾಗಿ" ಎಂದು ನಮೂದಿಸತಕ್ಕದ್ದು.

1. ಟೆಂಡರನ್ನು ದಿನಾಂಕ: 31.01.2004ರಂದು 4.00 ಘಂಟೆಯವರೆಗೆ ಸಚಿವಾಲಯ ಗ್ರಂಥಾಲಯ ಕೊಠಡಿ ಸಂಖ್ಯೆ 28 ನೆಲಮಹಡಿ, ವಿಧಾನಸೌಧ, ಬೆಂಗಳೂರು-01 ಈ ವಿಳಾಸಕ್ಕೆ ಸಲ್ಲಿಸುವುದು.
2. ಟೆಂಡರುದಾರರು ದಿನಪತ್ರಿಕೆಗಳಿಗೆ, ನಿಯತಕಾಲಿಕೆಗಳಿಗೆ ಹಾಗೂ ಪುಸ್ತಕಗಳಿಗೆ ಪ್ರತ್ಯೇಕವಾಗಿ ಕೆ.ಜಿ. ಒಂದಕ್ಕೆ ದರವನ್ನು ನಮೂದಿಸತಕ್ಕದ್ದು.
3. ಟೆಂಡರ್ ಅರ್ಜಿಯೊಂದಿಗೆ ರೂ. 5,000 (ರೂಪಾಯಿ ಐದು ಸಾವಿರ ಮಾತ್ರ) ಗಳ ಇಎಂಡಿ ಮೊತ್ತವನ್ನು ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಪಾವತಿಸತಕ್ಕದ್ದು. ಡಿಮಾಂಡ್ ಡ್ರಾಫ್ಟ್‌ನ್ನು "Under Secretary to Government DPAR Accounts 2" ಇವರ ಹೆಸರಿನಲ್ಲಿ ಪಡೆದು ಮುಖ್ಯ ಗ್ರಂಥಾಧಿಕಾರಿ, ಸಚಿವಾಲಯ ಗ್ರಂಥಾಲಯ, ಕೊಠಡಿ ಸಂಖ್ಯೆ: 28, ವಿಧಾನ ಸೌಧ, ಬೆಂಗಳೂರು ಇವರ ವಿಳಾಸಕ್ಕೆ ತಲುಪಿಸುವುದು.
4. ಟೆಂಡರನ್ನು ಅಂಗೀಕರಿಸುವ ಅಥವಾ ಕಾರಣ ರಹಿತವಾಗಿ ತಿರಸ್ಕರಿಸುವ ಸಂಪೂರ್ಣ ಅಧಿಕಾರವು ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಯವರಿಗೆ ಪ್ರದತ್ತವಾಗಿರುತ್ತದೆ.
5. ಯಶಸ್ವಿ ಗುತ್ತಿಗೆದಾರರು ಗುತ್ತಿಗೆ ಹಣದ ಮೊತ್ತವನ್ನು ಮೂರು ತಿಂಗಳಿಗೊಮ್ಮೆ ಅವರು ತೆಗೆದುಕೊಂಡು ಹೋಗುವ ದಿನಪತ್ರಿಕೆಗಳ/ ನಿಯತಕಾಲಿಕೆಗಳ/ ಹಳೆಯ ಪುಸ್ತಕಗಳ ತೂಕಕ್ಕೆ ಅನುಗುಣವಾಗಿ ಕ್ರಮ ಸಂಖ್ಯೆ: 3ರಲ್ಲಿ ನಮೂದಿಸಿರುವ ಲೆಕ್ಕ ಶೀರ್ಷಿಕೆಗೆ State Bank of Mysore, Treasury Branchನಲ್ಲಿ 0070- ಇತರೆ ಆಡಳಿತ ಸೇವೆಗಳು, 800- ಇತರೆ ಸ್ವೀಕೃತಿ ಎಂಬ ಲೆಕ್ಕಶೀರ್ಷಿಕೆಗೆ ಜಮಾ ಮಾಡಿದ ಮೂಲ ಚಲನನ್ನು ಈ ಕೆಳಗೆ ಸಹಿ ಮಾಡಲಾದ ಅಧಿಕಾರಿಗಳಿಗೆ ಸಲ್ಲಿಸತಕ್ಕದ್ದು.

6. ಯಶಸ್ವಿ ಗುತ್ತಿಗೆದಾರರು ಟೆಂಡರ್‌ನೊಂದಿಗೆ ಸಲ್ಲಿಸಿದ ಇಎಂಡಿ ರೂ. 5,000/- (ರೂಪಾಯಿ ಐದು ಸಾವಿರ ಮಾತ್ರ) ಭದ್ರತಾ ಠೇವಣಿಯೆಂದು ಇಟ್ಟುಕೊಳ್ಳಲಾಗುವುದು. ಈ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ.
7. ಯಶಸ್ವಿ ಅಲ್ಲದ ಟೆಂಡರ್‌ದಾರರು ಸಲ್ಲಿಸಿದ ಇಎಂಡಿ ಹಣವನ್ನು ಯಶಸ್ವಿ ಟೆಂಡರ್ ಗುತ್ತಿಗೆದಾರರ ಘೋಷಣೆಯಾದ ನಂತರ ಬಡ್ಡಿ ರಹಿತವಾಗಿ ಹಿಂದಿರುಗಿಸಲಾಗುವುದು.
8. ಯಶಸ್ವಿ ಟೆಂಡರ್‌ದಾರರು ತಮ್ಮದೇ ಆದ ಸ್ಪ್ರಿಂಗ್ ಬ್ಯಾಲೆನ್ಸ್‌ನ್ನು ತಂದು ಕಛೇರಿ ವೇಳೆಯಲ್ಲಿ ಹಳೆಯ ದಿನಪತ್ರಿಕೆ ಇತ್ಯಾದಿಗಳನ್ನು ತೂಕ ಮಾಡಿ ತೆಗೆದುಕೊಂಡು ಹೋಗುವುದು.
9. ಹಾಲಿ ಗುತ್ತಿಗೆ ಪಡೆದವರು ಅರ್ಜಿಯೊಂದಿಗೆ ಪುನಃ ಇಎಂಡಿ ಮೊತ್ತವನ್ನು ಪಾವತಿಸುವ ಅವಶ್ಯಕತೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡೇನಿಯಲ್ ಬರೆಟ್ಟೊ**

ಮುಖ್ಯ ಗ್ರಂಥಾಧಿಕಾರಿ ಹಾಗೂ

ಪಿ.ಆರ್.798 ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಗ್ರಂಥಾಲಯ)

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಲಾಲ್‌ಭಾಗ್ ಸಸ್ಯತೋಟ, ಲಾಲ್‌ಭಾಗ್ ಬೆಂಗಳೂರು

## ಟೆಂಡರ್ ಪ್ರಕಟಣೆ

**ಸಂಖ್ಯೆ: ತೋಉನಿ:ಲಾಸತೊ:ವಿನಿ1:46:2003-04, ಬೆಂಗಳೂರು, ದಿನಾಂಕ:8ನೇ ಡಿಸೆಂಬರ್, 2003**

ಲಾಲ್‌ಬಾಗ್ ಪ್ರವೇಶ ದ್ವಾರಗಳು ಸೇರಿದಂತೆ ಒಟ್ಟಾರೆ ಲಾಲ್‌ಭಾಗ್ ಸಸ್ಯತೋಟದ ಸಂಪೂರ್ಣ ಸುರಕ್ಷತೆಯನ್ನು ಕಾಪಾಡಲು ಭದ್ರತಾ ಸೇವೆಯನ್ನು ದಿನಾಂಕ: 01.04.2004 ರಿಂದ 31.03.2005 ವರೆಗೆ ಗುತ್ತಿಗೆ ಆಧಾರದ ಮೇಲೆ ಪಡೆಯಲು ನೋಂದಾಯಿತ ಸೆಕ್ಯುರಿಟಿ ಏಜೆನ್ಸಿ ರವರುಗಳಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಲಾಲ್‌ಭಾಗ್ ಸಸ್ಯತೋಟದಲ್ಲಿ ಯಾವುದೇ ಕಳ್ಳತನ ಅಥವಾ ನಾಶಮಾಡುವುದು ಇತ್ಯಾದಿಗಳಿಂದ ಉಂಟಾಗುವ ನಷ್ಟಗಳನ್ನು ಸೆಕ್ಯೂರಿಟಿ ಸಂಸ್ಥೆಯಿಂದಲೇ ಕಡಿತಗೊಳಿಸಲಾಗುವುದು ಆದುದರಿಂದ ಈ ಕೆಳಗೆ ಸೂಚಿಸಿರುವ ಭದ್ರತಾ ಸೇವೆಯನ್ನು ನಿರ್ವಹಿಸಲು ಹಾಗೂ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಪ್ಪಿದಲ್ಲಿ ಮಾತ್ರ ಈ ಕಛೇರಿಯಿಂದ ಮಾರಾಟ ಮಾಡುವ ಒಂದು ಟೆಂಡರ್ ಫಾರಂಗೆ ರೂ. 500-00 ಪಾವತಿ ಮಾಡಿ ದಿನಾಂಕ: 05.01.2004 ರಿಂದ 08.01.2004ರ ವರೆಗೆ ಪಡೆಯಬಹುದು. ಭರ್ತಿ ಮಾಡಿದ ಟೆಂಡರ್‌ಗಳನ್ನು 09.01.2004 ದಿನಾಂಕದಂದು 12.00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸುವುದು. ಟೆಂಡರ್‌ಗಳನ್ನು 09.01.2004 ದಿನಾಂಕದಂದು 3.30 ಗಂಟೆಗೆ ಅಥವಾ ನಿರ್ದೇಶಕರು ಸೂಚಿಸುವ ದಿನಾಂಕದಂದು ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು. ಟೆಂಡರ್‌ಗಳಲ್ಲಿ ನಮೂದಿಸಲಾದ ಕನಿಷ್ಟ ಮೊತ್ತದ ಟೆಂಡರ್‌ದಾರರಿಗೆ ಭದ್ರತಾ ಸೇವೆಯನ್ನು ಒದಗಿಸಲು ಕೆಳಕಂಡ ನಿಬಂಧನೆ ಷರತ್ತುಗಳಿಗೆ ಒಳಪಟ್ಟು ನೀಡಲಾಗುವುದು. ಒಂದು ವೇಳೆ, ಅತಿ ಕನಿಷ್ಟ ಮೊತ್ತ ನೀಡಿದ ಟೆಂಡರ್‌ದಾರರು ವಿಫಲರಾದಲ್ಲಿ, ತದನಂತರ ಕನಿಷ್ಟ ಮೊತ್ತ ನಮೂದಿಸಿದ ಟೆಂಡರ್‌ದಾರರನ್ನು ಭದ್ರತಾ ಸೇವೆಗಾಗಿ ಪರಿಗಣಿಸಲಾಗುವುದು.

**ನಿರ್ವಹಿಸಬೇಕಾದ ಭದ್ರತಾ ಸೇವೆಗಳು:**

1. ವರ್ಷದ 365 ದಿನಗಳಲ್ಲಿ 24 ಗಂಟೆಗಳ ಸಂಪೂರ್ಣ ಭದ್ರತಾ ಸೇವೆಯನ್ನು ಲಾಲ್‌ಭಾಗ್ ಸಸ್ಯತೋಟದಲ್ಲಿ ನಿರ್ವಹಿಸಬೇಕು. ಸಾರ್ವಜನಿಕರು ಮರ, ಗಿಡ, ಹೂವು, ಕಾಯಿ, ಹಣ್ಣು, ಎಲೆ ಕೀಳುವುದು, ಕೊಂಬೆಗಳಿಗೆ ಉಯ್ಯಾಲೆ ಕಟ್ಟುವುದು ಹಾಗೂ ಕೊಂಬೆಗಳಿಗೆ ಜೋತು ಬೀಳುವುದು ಇತ್ಯಾದಿ ಚಟುವಟಿಕೆಗಳನ್ನು ನಿರ್ಬಂಧಿಸಬೇಕು. ಅನಧಿಕೃತ ವ್ಯಕ್ತಿಗಳು ಸಮಯ ಮೀರಿ ತಿರುಗಾಡುವುದನ್ನು ನಿರ್ಬಂಧಿಸಿ, ಸಾಧ್ಯವಾದಷ್ಟು ತುರ್ತಾಗಿ ಇಂತಹ ಪ್ರಸಂಗಗಳನ್ನು ಇಲಾಖೆಯ ಮುಖ್ಯಸ್ಥರ ಗಮನಕ್ಕೆ/ ಸಂಬಂಧಿಸಿದವರ ಗಮನಕ್ಕೆ ತರಬೇಕು, ಹಾಗೂ ಅಗತ್ಯವಿದ್ದಲ್ಲಿ ತಕ್ಷಣ ಪೊಲೀಸ್ ಠಾಣೆಗೆ ದೂರು ಸಲ್ಲಿಸಬೇಕು/ ತರಬೇಕು.
2. ಲಾಲ್‌ಭಾಗ್ ಸಸ್ಯತೋಟದಲ್ಲಿ ಅನಧಿಕೃತವಾಗಿ ಬೀಜಗಳನ್ನು, ಗಿಡಗಳನ್ನು ಹಾಗೂ ಹೂವಿನ ಮಾರಾಟ, ತಿಂಡಿ ತಿನಿಸುಗಳನ್ನು ಇಲಾಖಾ ನೌಕರರಾಗಲಿ ಅಥವಾ ಸಾರ್ವಜನಿಕರಾಗಲಿ ಮಾರಾಟ ಮಾಡುವುದನ್ನು ನಿರ್ಬಂಧಿಸಬೇಕು. ವಿಶೇಷವಾಗಿ ಫಲಪುಷ್ಪ ಪ್ರದರ್ಶನದ ಸಂದರ್ಭದಲ್ಲಿ ಇಲಾಖೆ ವತಿಯಿಂದ ಅಧಿಕೃತ ಪರವಾನಗಿ ನೀಡಿದ ಸಂದರ್ಭದಲ್ಲಿ ಮಾತ್ರ ನಿರ್ಧರಿತ ಸ್ಥಳದಲ್ಲಿ ಮಾತ್ರ ಮೇಲಿನ ಪದಾರ್ಥಗಳನ್ನು ಮಾರಾಟ ಮಾಡಬಹುದಾಗಿರುತ್ತದೆ.
3. ಲಾಲ್‌ಭಾಗ್ ಸಸ್ಯತೋಟದೊಳಗೆ ಸರ್ಕಾರಿ ವಾಹನಗಳು ಮತ್ತು ಸರ್ಕಾರಿ ಕೆಲಸದ ಮೇಲೆ ಬರುವ ವಾಹನಗಳನ್ನು ಹೊರತುಪಡಿಸಿ ಇತರ ಯಾವುದೇ ತರಹದ ಖಾಸಗಿ ವಾಹನಗಳ (ಅಧಿಕೃತ ವಾಹನ ನಿಲ್ದಾಣವನ್ನು ಹೊರತುಪಡಿಸಿ) ಪ್ರವೇಶವನ್ನು ಮತ್ತು ನಿಲ್ದಾಣವನ್ನು ನಿರ್ಬಂಧಿಸಬೇಕು.
4. ಲಾಲ್‌ಭಾಗ್ ಸಮುಚ್ಚಯದಲ್ಲಿನ ಎಲ್ಲಾ ಕಾರಂಜಿಗಳು, ನೀರಿನ ಜಲಪಾತ (Water falls) ಗಳು, ಹೂವಿನ ಗಡಿಯಾರ, ಕೊಳವೆ ಬಾವಿಗಳು, ವಿದ್ಯುತ್ ಮೋಟಾರ್ ಪಂಪ್‌ಗಳು, ವಿದ್ಯುತ್ ದೀಪಗಳು ಕುಡಿಯುವ ನೀರಿಗಾಗಿ ಅಳವಡಿಸಿರುವ ಬಿಡಿ ಭಾಗಗಳು ತುಂತುರು ನೀರಾವರಿ: ಹನಿ ನೀರಾವರಿ ಪದ್ಧತಿಗೆ ಅಳವಡಿಸಿರುವ ಕೊಳವೆಗಳು, ಬಿಡಿ ಭಾಗಗಳು ಇತ್ಯಾದಿ ಯಾವುದೇ ವಸ್ತುಗಳಿಗೆ ಸಾರ್ವಜನಿಕರು/ ವ್ಯಕ್ತಿ ಹಾನಿ ಮಾಡುವುದನ್ನು ನಿರ್ಬಂಧಿಸಬೇಕು ಅಥವಾ ಕಳುವಾಗದಂತೆ ಸಂರಕ್ಷಿಸಬೇಕು.

5. ಲಾಲ್‌ಭಾಗ್ ನಲ್ಲಿ ಮತ್ತು ಕೆರೆಯಲ್ಲಿ ಪಕ್ಷಿಗಳು, ಮೀನುಗಳನ್ನು ಹಿಡಿಯುವುದು ಹಾಗೂ ಕೆರೆಯ ನೀರಿಗೆ ಪ್ಲಾಸ್ಟಿಕ್, ಕಲ್ಲು, ಮಣ್ಣು ಹಾಗೂ ಕರ್ಮ, ಶ್ರಾದ್ಧ, ಪೂಜೆ, ವಿಗ್ರಹ ವಿಸರ್ಜನೆ ಇತ್ಯಾದಿ ತ್ಯಾಜ್ಯ ವಸ್ತುಗಳನ್ನು ನೀರಿನಲ್ಲಿ ಎಸೆಯುವುದನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು.

6. ಲಾಲ್‌ಬಾಗ್ ಸಸ್ಯತೋಟದಲ್ಲಿರುವ ಕಾಂಫೋಸ್ಟ್ ಗುಂಡಿ ಅಥವಾ ಉದ್ಯಾನದೊಳಗಿನ ಎಲೆ, ಹುಲ್ಲು ಇತ್ಯಾದಿಗೆ ದುಷ್ಕರ್ಮಿಗಳಿಂದ ಬೆಂಕಿ ಹಚ್ಚದಂತೆ ಸಂರಕ್ಷಿಸಬೇಕು. ಆಕಸ್ಮಿಕವಾಗಿ ಬೆಂಕಿ ಬಿದ್ದಂತಹ ಸಂದರ್ಭದಲ್ಲಿ ತಕ್ಷಣ ಕ್ರಮ ಕೈಗೊಂಡು ಫೈರ್ ಸರ್ವೀಸ್‌ಗೆ ದೂರು ಸಲ್ಲಿಸಿ ಈ ಕಛೇರಿಗೆ ವರದಿ ಮಾಡಬೇಕು.

7. ಲಾಲ್‌ಭಾಗ್ ಸಸ್ಯತೋಟದೊಳಗೆ ಸಾರ್ವಜನಿಕರು: ಪ್ರವಾಸಿಗರು ಯಾವ ಸಮಯದಲ್ಲೇ ಆಗಲಿ ಮಲ ಮೂತ್ರ ವಿಸರ್ಜನೆ (ಸಿದ್ದಾಪುರ ಗೇಟ್, ಕೆಂಪೇಗೌಡ ಗೋಪುರ ಇತ್ಯಾದಿ ಕಡೆ) ಮಾಡುವುದನ್ನು ನಿರ್ಬಂಧಿಸಬೇಕು. ಸಾಕಿದ ನಾಯಿಗಳನ್ನು ಅಥವಾ ಬೀದಿ ನಾಯಿಗಳನ್ನು ಲಾಲ್‌ಭಾಗ್ ಒಳಗೆ ಪ್ರವೇಶಿಸದಂತೆ ನಿರ್ಬಂಧಿಸಬೇಕು. ಮರದ: ಸಿಮೆಂಟ್: ಮೊಸಾಯಿಕ್ ಬೆಂಚುಗಳ ಮೇಲೆ ಮಲಗುವುದಾಗಲಿ ಅಥವಾ ಅವುಗಳನ್ನು ಹಿಡಿದುಕೊಂಡು ವ್ಯಾಯಾಮ ಮಾಡುವುದನ್ನು ನಿರ್ಬಂಧಿಸಬೇಕು.

8. ಲಾಲ್‌ಭಾಗ್ ಒಳಗೆ ಚಲನಚಿತ್ರ, ಧಾರವಾಹಿ, ವಿಡಿಯೋ ಚಿತ್ರೀಕರಣ ಇಲಾಖೆಯಿಂದ ಅನುಮತಿ ಇಲ್ಲದೆ ಚಿತ್ರೀಕರಣ ಮಾಡುವುದನ್ನು ನಿರ್ಬಂಧಿಸಬೇಕು. ಶಾಸ್ತ್ರ ಹೇಳುವುದು, ಅನಧಿಕೃತ ಗೈಡ್ಸ್, ಯಾವುದೇ ಪ್ರಾರ್ಥನೆ ಮತೀಯ ಅಥವಾ ಸಭೆ, ಸಮಾರಂಭ, ಭಿಕ್ಷಾಟನೆ, ಧೂಮಪಾನ, ಮದ್ಯಪಾನ, ಮಾದಕ ವಸ್ತುಗಳ ಸೇವನೆ, ಜೂಜು, ಲೈಂಗಿಕ ಚಟುವಟಿಕೆಗಳು ಇತ್ಯಾದಿಯನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು.

9. ಪ್ರವಾಸಿಗರು: ಸಾರ್ವಜನಿಕರು ಹೊರಗಿನಿಂದ ಬ್ರೆಡ್ ಹಾಗೂ ಇತ್ಯಾದಿ ತಿನಿಸುಗಳನ್ನು ತಂದು ಹಕ್ಕಿಗಳಿಗೆ, ಪ್ರಾಣಿಗಳಿಗೆ ಮತ್ತು ಮೀನುಗಳಿಗೆ ಹಾಕುವುದನ್ನು ನಿರ್ಬಂಧಿಸಬೇಕು. ಲಾಲ್‌ಭಾಗ್ ವೀಕ್ಷಣೆಗೆ ಬರುವಂತಹ ಪ್ರವಾಸಿಗರಿಗೆ ಯಾವುದೇ ತರಹ ಸುಲಿಗೆ, ದಬ್ಬಾಳಿಕೆಯಂತಹ ಚಟುವಟಿಕೆಗಳು ಕಂಡುಬಂದಲ್ಲಿ ತಕ್ಷಣ ಪೊಲೀಸ್ ಠಾಣೆಗೆ ದೂರನ್ನು ದಾಖಲಿಸಬೇಕು.

10. ಲಾಲ್‌ಭಾಗ್ ಒಳಗೆ ರಾತ್ರಿ 8 ರಿಂದ ಬೆಳಗ್ಗೆ 6 ರವರೆಗೆ ಕರ್ತವ್ಯದಲ್ಲಿರುವ ಅಧಿಕಾರಿ: ನೌಕರರನ್ನು ಹೊರತುಪಡಿಸಿ ಸಾರ್ವಜನಿಕರು ಕಂಡುಬಂದಲ್ಲಿ ಹೊರಗೆ ಕಳುಹಿಸಬೇಕು. ಆಕಸ್ಮಿಕವಾಗಿ ಯಾರಾದರೂ ಮರಣ ಹೊಂದಿದ ಸಂದರ್ಭದಲ್ಲಿ ತಕ್ಷಣ ಪೊಲೀಸ್ ಠಾಣೆಗೆ ದೂರು ಸಲ್ಲಿಸಿ ಈ ಕಛೇರಿಗೆ ವರದಿ ಮಾಡಬೇಕು.

11. ಪ್ರವಾಸಿಗರಿಂದ ಪ್ಲಾಸ್ಟಿಕ್, ಕಾಗದ ಇತ್ಯಾದಿಗಳನ್ನು ಕಸದ ಡಬ್ಬಿಗಳಲ್ಲಿಯೇ ಎಸೆಯುವಂತೆ ಸೂಚಿಸಬೇಕು.

12. ಲಾಲ್‌ಭಾಗ್ ಸಮುಚ್ಚಯದಲ್ಲಿ ಯಾವುದೇ ತರಹದ ಕ್ರೀಡೆಗಳು ಅಥವಾ ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರ್ಬಂಧಿಸಬೇಕು. ಲಾಲ್‌ಭಾಗ್ ಉದ್ಯಾನದಲ್ಲಿ ಟಿಕೇಟ್ ಪಡೆಯದೆ ಅನಧಿಕೃತ ಪ್ರವೇಶ ಮಾಡುವಂತಹ ಸಾರ್ವಜನಿಕರನ್ನು ಗುರುತಿಸಿ ಟಿಕೇಟ್ ಪಡೆಯಲು ಸೂಚಿಸಬೇಕು. ಗಣೇಶ ಚತುರ್ದಶಿ ಸಮಯದಲ್ಲಿ ಗಣಪತಿ ವಿಗ್ರಹವನ್ನು ಲಾಲ್‌ಭಾಗ್ ಕೆರೆಯಲ್ಲಿ ವಿಸರ್ಜಿಸಲು ಇಲಾಖೆಯಿಂದ ಅನುಮತಿ ನೀಡಿದಲ್ಲಿ ಹೂವು, ಹಣ್ಣು, ಕಾಯಿ ಇತ್ಯಾದಿ ಪೂಜಾ ವಸ್ತುಗಳನ್ನು ಹೊರ ತೆಗೆದು ವಿಗ್ರಹವನ್ನು ಮಾತ್ರ ನೀರಿನಲ್ಲಿ ಬಿಡುವಂತೆ ಸೂಚಿಸಬೇಕು.

13. ಮೇಲೆ ತಿಳಿಸಿದ ಸಂದರ್ಭದಲ್ಲಿ ಯಾವುದೇ ತುರ್ತು ಸಂದರ್ಭದಲ್ಲಿ ಅಗತ್ಯವಿದ್ದರೆ ಕೂಡಲೇ ಪೊಲೀಸ್ ಠಾಣೆಗೆ ದೂರು ಸಲ್ಲಿಸಿ ತಕ್ಷಣ ಮೇಲಾಧಿಕಾರಿಗಳ ಗಮನಕ್ಕೆ ತರುವುದು.

ಮೇಲೆ ಸೂಚಿಸಿದ ಕೆಲಸಗಳಲ್ಲದೆ ನಿರ್ದೇಶನಾಲಯದಿಂದ ಕಾಲ ಕಾಲಕ್ಕೆ ಭದ್ರತೆಗೆ ಸಂಬಂಧಿಸಿದ ಸೂಚನೆಗಳನ್ನು ಮತ್ತು ಕೆಲಸಗಳನ್ನು ಸಹ ಪಾಲಿಸತಕ್ಕದ್ದು.

**ಷರತ್ತು ಹಾಗೂ ನಿಬಂಧನೆಗಳು:**

1. ಟೆಂಡರ್ ಸಲ್ಲಿಸುವ ಸಮಯದಲ್ಲಿ ರೂ. 1.00 ಲಕ್ಷ ಮೌಲ್ಯದ ಭದ್ರತಾ ಠೇವಣಿಯನ್ನು ಅಧ್ಯಕ್ಷರು, ಬೆಂಗಳೂರು ಗಾರ್ಡನ್ ಟ್ರಸ್ಟ್ ರವರಿಗೆ ಪಾವತಿಯಾಗುವಂತೆ ಬ್ಯಾಂಕ್ ಡ್ರಾಫ್ಟ್ ತೆಗೆದು ಲಗತ್ತಿಸಿರಬೇಕು. ಅಂಗೀಕೃತ ಟೆಂಡರ್‌ದಾರರ E.M.D. ಯನ್ನು ಬಿಟ್ಟು ಉಳಿದ ಟೆಂಡರ್‌ದಾರರ ಠೇವಣಿಯನ್ನು ಟೆಂಡರ್‌ಗಳ ಪರಿಶೀಲನೆ ನಂತರ ಹಿಂತಿರುಗಿಸಲಾಗುವುದು. ಯಶಸ್ವಿ ಟೆಂಡರ್‌ದಾರರ ಠೇವಣಿಯನ್ನು ಗುತ್ತಿಗೆ ಅವಧಿಯನ್ನು ಯಶಸ್ವಿಯಾಗಿ ಪೂರೈಸಿದ ನಂತರ ಹಿಂತಿರುಗಿಸಲಾಗುವುದು. ಈ E.M.D., ಮೊತ್ತಕ್ಕೆ ಯಾವುದೇ ತರಹ ಬಡ್ಡಿಯನ್ನು ಪಾವತಿಸಲಾಗುವುದಿಲ್ಲ.

2. ಟೆಂಡರ್ ಅರ್ಜಿಯ ಜೊತೆಗೆ ಸರ್ಕಾರದ ಅಂಗ ಸಂಸ್ಥೆಗಳಲ್ಲಿ ಅಥವಾ ಸಾರ್ವಜನಿಕ ಉದ್ಯಮಗಳಲ್ಲಿ ಕನಿಷ್ಠ ಮೂರು ವರ್ಷಗಳ ಭದ್ರತಾ ಸೇವೆಯನ್ನು ತೃಪ್ತಿಕರವಾಗಿ ಒದಗಿಸಿದ ದೃಢೀಕರಣ ಪತ್ರವನ್ನು ಟೆಂಡರ್‌ದಾರರು ಲಗತ್ತಿಸಿರಬೇಕು. ಟೆಂಡರ್‌ದಾರರು ಕರ್ನಾಟಕ ಕಾರ್ಮಿಕ ಕಾಯ್ದೆ ಅನ್ವಯ ಭದ್ರತಾ ಸಿಬ್ಬಂದಿಗೆ ಕನಿಷ್ಠ ವೇತನವನ್ನು ಪಾವತಿ ಮಾಡಬೇಕು ಹಾಗೂ ಕಾರ್ಮಿಕ ಇಲಾಖೆಯಿಂದ ಅಧಿಕೃತ ನೋಂದಣಿ ದೃಢೀಕರಣವನ್ನು ಪಡೆದು ಟೆಂಡರ್ ಜೊತೆ ಲಗತ್ತಿಸಿರಬೇಕು. 2002-03ನೇ ಸಾಲಿನ ಆದಾಯ ತೆರಿಗೆ ಇಲಾಖೆಯಿಂದ ಪಡೆದ ಕ್ಲಿಯರೆನ್ಸ್ ದೃಢೀಕರಣವನ್ನು ಲಗತ್ತಿಸಿರಬೇಕು. ಎಲ್ಲಾ ಭದ್ರತಾ ಸಿಬ್ಬಂದಿಗೂ ಸಮವಸ್ತ್ರ ಹಾಗೂ ಅವರುಗಳ ಹೆಸರು ಸೂಚಿಸುವ ಬ್ಯಾಡ್ಜ್‌ಗಳನ್ನು ಒದಗಿಸಬೇಕು. ಭದ್ರತಾ ಸಿಬ್ಬಂದಿಯು ಕನಿಷ್ಠ ಎಸ್.ಎಸ್.ಎಲ್.ಸಿ. ವಿದ್ಯಾಭ್ಯಾಸವನ್ನು ಮಾಡಿರುವಂತಹ ಮತ್ತು ಕನ್ನಡ ಭಾಷೆಯನ್ನು ಮಾತನಾಡುವಂತಹ ಸಿಬ್ಬಂದಿಯನ್ನು ನೇಮಿಸಬೇಕು. ನಿವೃತ್ತ ಸೈನಿಕರು ಅಥವಾ ತತ್ಸಮಾನವಾದ ತರಬೇತಿಯನ್ನು ಪಡೆದ ಸಿಬ್ಬಂದಿಯನ್ನು ಮಾತ್ರ ನೇಮಿಸಬೇಕು. ಇದಕ್ಕೆ ಸಂಬಂಧಪಟ್ಟ ಅಭ್ಯರ್ಥಿಯ ತರಬೇತಿಯ ಪ್ರಮಾಣ ಪತ್ರಗಳನ್ನು ಕಛೇರಿಗೆ ಸಲ್ಲಿಸಬೇಕು. ಮತ್ತು ಇವರುಗಳಲ್ಲಿ ಗರಿಷ್ಠ 40 ವರ್ಷಗಳ ವಯೋಮಿತಿ ಒಳಗಿನ ಸಿಬ್ಬಂದಿಯನ್ನು ಮಾತ್ರ ನೇಮಿಸಬೇಕು. ಕನಿಷ್ಠ ಒಟ್ಟು 60 ಸಿಬ್ಬಂದಿಯನ್ನು ನೇಮಿಸಿ ಪ್ರತಿ ಪಾಳಿಯಲ್ಲಿ ಕನಿಷ್ಠ 20 ಸಿಬ್ಬಂದಿ ಇರುವಂತೆ ನೋಡಿಕೊಳ್ಳಬೇಕು ಅವರುಗಳ ಸಂಪೂರ್ಣ ವೈಯಕ್ತಿಕ ಮಾಹಿತಿಯನ್ನು

ಭಾವಚಿತ್ರ ಸಮೇತವಾಗಿ ಸೆಕ್ಯುರಿಟಿ ಸೇವೆಯನ್ನು ವಹಿಸಿಕೊಳ್ಳುವ ಮೊದಲು ಈ ಕಛೇರಿಗೆ ಸಲ್ಲಿಸಬೇಕು. ಒಂದು ವೇಳೆ ಸಿಬ್ಬಂದಿಯನ್ನು ಬದಲಾಯಿಸಿದಲ್ಲಿ ಬದಲಾದ ಸಿಬ್ಬಂದಿಯ ವೈಯಕ್ತಿಕ ಮಾಹಿತಿಯನ್ನು ತಕ್ಷಣ ಈ ಕಛೇರಿಗೆ ಸಲ್ಲಿಸಬೇಕು.

3. ಭದ್ರತಾ ಸೇವೆಯನ್ನು ಸೂಚಿಸಿರುವ ಷರತ್ತು ಹಾಗೂ ನಿಬಂಧನೆಗಳಂತೆ ನಿರ್ವಹಿಸಲು ವಿಫಲರಾದಲ್ಲಿ ಅಥವಾ ನಿರ್ಧರಿತ ಅವಧಿ ಮಧ್ಯದಲ್ಲಿಯೇ ಸ್ಥಗಿತಗೊಳಿಸಿದಲ್ಲಿ ಮತ್ತು ಟೆಂಡರ್ ಅನುಮೋದಿಸಿ ಭದ್ರತಾ ಸೇವೆಯನ್ನು ಒದಗಿಸಲು ಸೂಚಿಸಿದ ಒಂದು ತಿಂಗಳ ಒಳಗೆ ಭದ್ರತಾ ಸಿಬ್ಬಂದಿಯನ್ನು ನೇಮಿಸಲು ವಿಫಲರಾದಲ್ಲಿ ಟೆಂಡರ್ ಸಮಯದಲ್ಲಿ ನೀಡಿದ ರೂ. 1.00 ಲಕ್ಷ ರೂಪಾಯಿಯ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಕಾನೂನಿನಂತೆ ಕ್ರಮ ಜರುಗಿಸಲಾಗುವುದು. ಜೊತೆಗೆ ಕಾರ್ಯ ನಿರ್ವಹಣೆ ಅವಧಿಯಲ್ಲಿ ನಿಗದಿತ ಷರತ್ತು ಹಾಗೂ ನಿಬಂಧನೆಗಳನ್ವಯ ಲೋಪದೋಷ ಉಂಟಾದಲ್ಲಿ ಶೇಕಡ 20 ಭಾಗದಷ್ಟು ದಂಡವನ್ನು ವಿಧಿಸಿ ಪ್ರತಿ ಮಾಹೆಯಲ್ಲಿ ಗುತ್ತಿಗೆ ಹಣವನ್ನು ಪಾವತಿ ಮಾಡುವ ಸಮಯದಲ್ಲಿ ಕಡಿತಗೊಳಿಸಲಾಗುವುದು.

4. ಯಶಸ್ವಿ ಟೆಂಡರ್‌ದಾರರು ಭದ್ರತಾ ಸೇವೆಯನ್ನು ವಹಿಸಿಕೊಳ್ಳುವ ಮೊದಲು ಅಥವಾ ಕಾರ್ಯಾದೇಶ ನೀಡಿದ ಒಂದು ತಿಂಗಳ ಒಳಗೆ ರೂ. 2.00 ಲಕ್ಷ ಮೌಲ್ಯಕ್ಕೆ ರಾಷ್ಟ್ರೀಕೃತ ಬ್ಯಾಂಕೊಂದರಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಪತ್ರವನ್ನು ಈ ಕಛೇರಿಗೆ ಸಲ್ಲಿಸಬೇಕು.

5. ಲಾಲ್‌ಭಾಗ್ ಸಸ್ಯತೋಟದಲ್ಲಿ ನಡೆಯುವ ಫಲಪುಷ್ಪ ಪ್ರದರ್ಶನಗಳ ಸಮಯದಲ್ಲಿ ಹೆಚ್ಚುವರಿ ಭದ್ರತಾ ಸಿಬ್ಬಂದಿಯನ್ನು ನೇಮಿಸಬೇಕು.

6. ಭರ್ತಿ ಮಾಡಿದ ಟೆಂಡರ್‌ಗಳನ್ನು ಪರಿಗಣಿಸುವ ಮೊದಲು ನೋಂದಾಯಿತ ಸೆಕ್ಯುರಿಟಿ ಸಂಸ್ಥೆಯವರು ಹೊಂದಿರುವ ಕಛೇರಿ ಮತ್ತು ಅವರು ಹೊಂದಿರುವ ಭದ್ರತಾ ಸಿಬ್ಬಂದಿ ಇತ್ಯಾದಿ ದಾಖಲಾತಿಗಳನ್ನು ಸ್ಥಳಕ್ಕೆ ಬಂದು ಪರಿಶೀಲಿಸಲಾಗುವುದು. ಒಂದು ವೇಳೆ ಅತಿ ಕನಿಷ್ಟ ಮೊತ್ತ ನಮೂದಿಸಿ ಸಲ್ಲಿಸಿದ ಟೆಂಡರ್‌ದಾರರು ಅಗತ್ಯ ಸಿಬ್ಬಂದಿ ಇತ್ಯಾದಿ ತಾಂತ್ರಿಕ ಹಾಗೂ ಆಡಳಿತಾತ್ಮಕ ಮೂಲ ಸೌಲಭ್ಯಗಳು ಇಲ್ಲದೆ ಹೋದಲ್ಲಿ ಅಂತಹ ಗುತ್ತಿಗೆದಾರರ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಈ ಎಲ್ಲಾ ಸೌಲಭ್ಯಗಳು ಇದ್ದಲ್ಲಿ ಮಾತ್ರ ಅಂತಹವರ ಟೆಂಡರ್‌ಗಳನ್ನು ಅನುಮೋದನೆಗಾಗಿ ಪರಿಶೀಲಿಸಲಾಗುವುದು.

7. ಟೆಂಡರ್‌ಗಳನ್ನು ಅನುಮೋದಿಸುವ ಅಥವಾ ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ಮತ್ತು ಭದ್ರತಾ ಸೇವೆಯನ್ನು ಒದಗಿಸುವ ಅವಧಿಯನ್ನು ಒಂದು ವರ್ಷದ ಒಳಗೆ ಮೊಟಕುಗೊಳಿಸುವ ಅಥವಾ ರದ್ದು ಪಡಿಸುವ ಹಕ್ಕನ್ನು ಇಲಾಖೆಗೆ ಕಾಯ್ದಿರಿಸಲಾಗಿದೆ.

8. ಯಶಸ್ವಿ ಟೆಂಡರ್‌ದಾರರು ಭದ್ರತಾ ಸೇವೆಯನ್ನು ವಹಿಸಿಕೊಳ್ಳುವ ಮೊದಲು ಈ ಮೇಲೆ ಸೂಚಿಸಿರುವ ನಿರ್ವಹಿಸಬೇಕಾದ ಕೆಲಸಗಳನ್ನು ನಿರ್ವಹಿಸುವುದಾಗಿ ಮತ್ತು ಷರತ್ತು ನಿಬಂಧನೆಗಳಿಗೆ ಬದ್ಧನಾಗಿರುತ್ತೇನೆ ಎಂದು ರೂ. 100.00 ಮೌಲ್ಯದ ಛಾಪಾ ಕಾಗದದ ಮೇಲೆ ತೋಟಗಾರಿಕೆ ಉಪ ನಿರ್ದೇಶಕರು, ಲಾಲ್‌ಭಾಗ್ ಸಸ್ಯತೋಟ ರವರೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು.

ತೋಟಗಾರಿಕೆ ಉಪ ನಿರ್ದೇಶಕರು,
ಪಿ.ಆರ್.799 ಲಾಲ್‌ಭಾಗ್ ಸಸ್ಯತೋಟ.

**DEPARTMENT OF ANIMAL HUSBANDRY & VETERINARY SERVICES, BANGALORE-560 001**

**TENDER NOTIFICATION**

**No.DVD/12/TENDER/2003-04, Dated:15th December, 2003**

The Department of Animal Husbandry & Veterinary Services intends to purchase Veterinary Drugs, Chemicals & Artificial Insemination equipments for the use by the Veterinary Institutions in the State. The Director of Animal Husbandry & Veterinary Services, Government of Karnataka, Bangalore hereby invites lac sealed tamper proof tenders, from registered eligible tenderers for the supply of Veterinary Drugs, Chemicals & equipments etc., with a validity period for two years.

Interested registered eligible tenderers may obtain further information from the Assistant Director, Medical Stores (Veterinary), Hebbal, Bangalore-560 024 during Office hours. Eligible tenderers may get their names registered in the Office of the Assistant Director, Medical Stores (Veterinary), State Semen Collection Center Premises, Hebbal, Bangalore-560 024 on payment of Rs. 100/- in the form of Demand Draft / Pay order drawn from any of the Nationalized Banks in favour of the above Officer.

A complete set of tender documents in original and copy may be purchased by any interested registered eligible tenderers from 17.12.2003 to 16.01.2004 upto 4.00 PM on the last day on submission of written application and upon payment of non-refundable fee of Rs. 550/- (inclusive of taxes) for tender document in the form of Demand Draft/ Pay Order drawn on any of the Nationalized Banks in favour of Assistant Director, Medical Stores, (Veterinary), State Semen Collection Centre premises, Hebbal, Bangalore-560 024.

The tender documents requested by mail will be despatched by Registered post on payment of extra amount of Rs. 95/- (inland) for each Tender document. The Director, Animal Husbandry & Veterinary Services, Karnataka, Bangalore will not be held responsible for postal delay if any in delivering the tender documents or non-receipt of the same. The tenderers are free to quote for one or more items

under Veterinary Drugs, Chemicals & equipments etc., (for details refer Section 4 & 5 of the Tender document). The evaluation will be on individual item basis.

All tenders in original and copy must be accompanied by Earnest Money Deposit and other documents/ certificates, specified in the tender document and must be delivered to the Director, Animal Husbandry & Veterinary Services, Vishveshwaraya Mini Tower, 2nd Floor, Dr. B.R. Ambedkar Veedhi, Bangalore-560 001 on or before 16.01.2004 at 17.00 hours.

The tenders will be opened on 17.01.2004 at 11 A.M. in presence of tenderers or their authorised representatives who choose to attend on the specified date and time in the Additional Director's Chamber, Animal Husbandry & Veterinary Services Vishveshwaraya Mini Tower, 5th Floor, Dr. B.R. Ambedkar Veedhi, Bangalore-560 001.

**Dr. H. RAFEEQ ANWAR**
Director,
Animal Husbandry & Veterinary Services,
Bangalore-560 001.

PR-800

## ಕರ್ನಾಟಕ ಲೋಕಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್" ಬೆಂಗಳೂರು

### ತಿದ್ದುಪಡಿ

**ಸಂಖ್ಯೆ: ಇಪ(1)/1126/2003-04/ಪಿಎಸ್‌ಸಿ, ಬೆಂಗಳೂರು, ದಿನಾಂಕ:27ನೇ ನವಂಬರ್, 2003**

ದಿನಾಂಕ: 13.11.2003ರ ಕರ್ನಾಟಕ ರಾಜ್ಯಪತ್ರದ ಭಾಗ-5ರಲ್ಲಿ ಪ್ರಕಟಿಸಲಾಗಿರುವ 2003ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶದಲ್ಲಿ "ಉಡುಪಿ" ಕೇಂದ್ರ ಶೀರ್ಷಿಕೆ ಕೆಳಗೆ ಅಪೆಂಡಿಕ್ಸ್-'ಎ' ಯ ಅಡಿಯಲ್ಲಿ ಫುಡ್ ಅಂಡ್ ಸಿವಿಲ್ ಸಪ್ಲೈಸ್ (ಎಕ್ಸಾಮಿನೇಷನ್) ವಿಷಯಕ್ಕೆ ಸಂಬಂಧಿಸಿದಂತೆ ಪ್ರಥಮ ದರ್ಜೆಯಡಿ 'ನಿಲ್' ಎನ್ನುವ ಶಬ್ದದ ಬದಲಿಗೆ ನೋಂದಣಿ ಸಂಖ್ಯೆ: 43259 ಅನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

**ಬಿ.ಎ. ಹರೀಶ್‌ಗೌಡ**
ಕಾರ್ಯದರ್ಶಿ
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

ಪಿ.ಆರ್. 802

## ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು

### ಕರ್ನಾಟಕ ಲೋಕಸೇವಾ ಆಯೋಗದ ನಡವಳಿಗಳು

**ವಿಷಯ:** ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2003ರ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅಭ್ಯರ್ಥಿಯಾದ ಶ್ರೀ ಗೋವಿಂದ ಜಾದವ್ (ನೋಂದಣಿ ಸಂಖ್ಯೆ:39733) ಇವರು ಸದರಿ ಪರೀಕ್ಷೆಯಲ್ಲಿ ಎಸಗಿದ್ದ ದುರಾಚಾರ ಪ್ರಕರಣದ ಬಗ್ಗೆ ವಿಚಾರಣೆ-ಆದೇಶ.

**ಓದಲಾಗಿದೆ:** 1. ಶ್ರೀ ಗೋವಿಂದ ಜಾದವ್‌ರವರ ಅರ್ಜಿ ದಿನಾಂಕ:22.06.2003
2. ತಿಳುವಳಿಕೆ ಪತ್ರ ಸಂಖ್ಯೆ:108/37/2003-04/ಪಿಎಸ್‌ಸಿ ದಿನಾಂಕ:08.08.2003

ಆಯೋಗವು ನಡೆಸಿದ 2003ನೇ ಸಾಲಿನ ಪ್ರಥಮ ಅಧಿವೇಶನದ ಜನರಲ್ ಲಾ ಭಾಗ-1 ಮತ್ತು 2ರ ಇಲಾಖಾ ಪರೀಕ್ಷೆಗಳಿಗೆ ಶ್ರೀ ಗೋವಿಂದ ಜಾದವ್ ಎಂಬುವರು ಬಾಗಲಕೋಟೆ ಕೇಂದ್ರದಿಂದ ಉಲ್ಲೇಖ (1)ರಲ್ಲಿ ಓದಲಾದ ಅರ್ಜಿಯನ್ನು ಸಲ್ಲಿಸಿದ್ದು ಆಯೋಗವು ಅದನ್ನು ಅಂಗೀಕರಿಸಿ ಅವರಿಗೆ ನೋಂದಣಿ ಸಂಖ್ಯೆ: 39733ಅನ್ನು ನೀಡಿತ್ತು. ಅದರ ಮೇರೆಗೆ ಅವರು ಸದರಿ ಪರೀಕ್ಷೆಗಳಿಗೆ ಹಾಜರಾಗಿರುತ್ತಾರೆ.

ಪರೀಕ್ಷೋತ್ತರ ಕಾರ್ಯದ ಸಂದರ್ಭದಲ್ಲಿ ಸದರಿ ಪರೀಕ್ಷೆಗಳ ಜನರಲ್ ಲಾ ಭಾಗ-2ರ ಉತ್ತರ ಪತ್ರಿಕೆಗಳನ್ನು ನಾಮಿನಲ್‌ರೋಲ್-ಕಂ-ಹಾಜರಾತಿ ಪಟ್ಟಿಯೊಂದಿಗೆ ತಾಳೆ ಮಾಡುತ್ತಿದ್ದ ಸಮಯದಲ್ಲಿ ಈ ಅಭ್ಯರ್ಥಿಯ ಉತ್ತರ ಪತ್ರಿಕೆಯ ಮೇಲ್ಭಾಗದಲ್ಲಿ ನೋಂದಣಿ ಸಂಖ್ಯೆ: 39733 ಎಂದು ಸ್ಪಷ್ಟವಾಗಿ ಬರೆದಿರಲಿಲ್ಲ. ಹೀಗಾಗಿ ಅಭ್ಯರ್ಥಿಗಳಿಗೆ ನೀಡಲಾಗಿದ್ದ ನಮೂನೆ 'ಎ' ಅನ್ನು ಪರಿಶೀಲಿಸಲಾಗಿ ಅದರಲ್ಲಿ ನಮೂದಿಸಲಾದ ಉತ್ತರಪತ್ರಿಕೆಯ ಸಂಖ್ಯೆಯು ಇದಕ್ಕೆ ತಾಳೆಯಾಗಿರುವುದಿಲ್ಲ. ಅಂದರೆ ನೋಂದಣಿ ಸಂಖ್ಯೆ:39733ರ ಅಭ್ಯರ್ಥಿಗೆ ಹಂಚಿಕೆಯಾದ ಉತ್ತರ ಪತ್ರಿಕೆಯ ಕ್ರ.ಸಂ. 065357 ಆಗಿದ್ದು, ಈ ಅಭ್ಯರ್ಥಿಯು ಉತ್ತರ ಬರೆದಿರುವ ಪತ್ರಿಕೆಯ ಕ್ರಮಸಂಖ್ಯೆಯು 0550324 ಆಗಿರುತ್ತದೆ. ಅಲ್ಲದೆ, ನಮೂನೆ 'ಎ'ರಲ್ಲಿ ಅಭ್ಯರ್ಥಿಯು ಒಂದು ಅಧಿಕ ಉತ್ತರಪತ್ರಿಕೆ ಪಡೆದಿರುವ ಬಗ್ಗೆ ದಾಖಲೆ ಇದ್ದು ಅದನ್ನು ಮುಖ್ಯ ಉತ್ತರ ಪತ್ರಿಕೆಗೆ ಲಗತ್ತಿಸಿರುವುದಿಲ್ಲ ಹಾಗೂ ಆ ಬಗ್ಗೆ ಯಾವುದೇ ಕುರುಹು ಸಹಾ ಕಂಡುಬಂದಿರುವುದಿಲ್ಲ. ಹೀಗಾಗಿ ಉತ್ತರ ಪತ್ರಿಕೆಯಲ್ಲಿನ ಹಸ್ತಾಕ್ಷರವನ್ನು ಪರಿಶೀಲಿಸಲಾಗಿ ಉತ್ತರ ಪತ್ರಿಕೆಯ ಮುಖಪುಟದಲ್ಲಿನ ಬರವಣಿಗೆಗೂ ಮತ್ತು ಒಳಪುಟಗಳಲ್ಲಿನ ಬರವಣಿಗೆಗೂ ಸಾಮ್ಯತೆ ಇಲ್ಲದಿರುವುದು ಕಂಡು ಬಂದಿರುತ್ತದೆ.

ಆದಕಾರಣ ದಿನಾಂಕ:18.08.2003ರಂದು ಈ ಬಗ್ಗೆ ವಿಚಾರಣೆಗೆ ಹಾಜರಾಗುವಂತೆ ಉಲ್ಲೇಖ (2)ರಲ್ಲಿ ಓದಲಾದ ತಿಳುವಳಿಕೆ ಪತ್ರದಲ್ಲಿ ಅಭ್ಯರ್ಥಿಗೆ ಸೂಚಿಸಲಾಗಿತ್ತು. ಆದರೆ ಅವರು ಆ ದಿನದಂದು ಹಾಜರಾಗದೆ ದಿನಾಂಕ:29.08.2003ರಂದು ಹಾಜರಾಗಿರುತ್ತಾರೆ. ವಿಚಾರಣಾ ಕಾಲದಲ್ಲಿ ಅವರೇ ನಮೂದಿಸಿರುವ ನೋಂದಣಿ ಸಂಖ್ಯೆ: 39733ರ, ಜನರಲ್ ಲಾ ಭಾಗ-2ರ, ಉತ್ತರ ಪತ್ರಿಕೆಯ ಮೊದಲ ಪುಟದಲ್ಲಿನ ಉತ್ತರವನ್ನು ಅವರ ಕೈ ಬರವಣಿಗೆಯಿಂದಲೇ ಪುನಃ ಬರೆಸಿ ಸದರಿ ಉತ್ತರ ಪತ್ರಿಕೆಯನ್ನು ಅವರಿಗೆ ತೋರಿಸಿ ಉತ್ತರ ಪತ್ರಿಕೆಯಲ್ಲಿನ ಬರವಣಿಗೆಗೂ ಮತ್ತು ವಿಚಾರಣಾ ಕಾಲದಲ್ಲಿ ಅವರು ಬರೆದ ಬರವಣಿಗೆಗೂ ಇರುವ ವ್ಯತ್ಯಾಸವನ್ನು ಅವರ ಗಮನಕ್ಕೆ

ತರಲಾಗಿ ಅವರು ಜನರಲ್ ಲಾ ಭಾಗ-2ರ ಉತ್ತರಪತ್ರಿಕೆಯ ಮುಖಪುಟದ ಮೇಲಿನ ನೋಂದಣಿ ಸಂಖ್ಯೆ, ಪರೀಕ್ಷಾ ವಿಷಯ, ಇತ್ಯಾದಿಗಳು ಅವರ ಹಸ್ತಾಕ್ಷರದಲ್ಲಿ ಇರುತ್ತವೆಯೆಂದೂ ಆದರೆ ಒಳಪುಟಗಳಲ್ಲಿರುವ ಉತ್ತರಗಳು ಅವರ ಹಸ್ತಾಕ್ಷರದಲ್ಲಿ ಇರುವುದಿಲ್ಲವೆಂದೂ, ಮತ್ತು ಉತ್ತರಗಳನ್ನು ಬರೆದಿರುವ ಹಸ್ತಾಕ್ಷರಗಳು ಯಾರದೆಂಬುದು ಅವರಿಗೆ ತಿಳಿಯದೆಂದೂ ತಿಳಿಸಿರುತ್ತಾರೆ ಹಾಗೂ ಅವರ ಉತ್ತರ ಪತ್ರಿಕೆಯಲ್ಲಿ ಬೇರೆಯವರ ಹಸ್ತಾಕ್ಷರದ ಉತ್ತರಗಳು ಬರುವ ಸಾಧ್ಯತೆಯ ಬಗ್ಗೆ ವಿವರಣೆ ನೀಡಲು ಅವರಿಂದ ಸಾಧ್ಯವಿಲ್ಲವೆಂದೂ ತಿಳಿಸಿರುತ್ತಾರೆ. ಇದರಿಂದಾಗಿ ಆಪಾದಿತ ಅಭ್ಯರ್ಥಿಯು ಜನರಲ್ ಲಾ ಭಾಗ-2ರ ಉತ್ತರಪತ್ರಿಕೆಯಲ್ಲಿ ಬರವಣಿಗೆಯು ಅವರ ಹಸ್ತಾಕ್ಷರದಲ್ಲಿರದೆ ಬೇರೆಯವರ ಹಸ್ತಾಕ್ಷರದಲ್ಲಿ ಇದೆಯೆಂಬುದನ್ನು ಒಪ್ಪಿಕೊಂಡಂತಾಗಿದ್ದು ಆ ಬಗ್ಗೆ ವಿವರಗಳನ್ನು ನೀಡಲು ಅವರು ಅಸಮರ್ಥರಾದುದರಿಂದ ಪರೀಕ್ಷೆಗಳಲ್ಲಿ ಅವರು ಅವ್ಯವಹಾರ ಎಸಗಿರುವುದು ದೃಢಪಟ್ಟಿರುತ್ತದೆ ಹಾಗೂ ಅವರ ವಿರುದ್ಧ ಮಾಡಲಾದ ಆರೋಪವು ಸಾಬೀತಾದಂತಾಗಿರುತ್ತದೆ.

ಆಯೋಗವು ಈ ಪ್ರಕರಣದಲ್ಲಿ ಅಭ್ಯರ್ಥಿಯು ನೀಡಿದ ಹೇಳಿಕೆ, ದಾಖಲೆ ಇತ್ಯಾದಿಗಳನ್ನು ಕೂಲಂಕಶವಾಗಿ ಪರಿಶೀಲಿಸಿ ಆಪಾದಿತ ಅಭ್ಯರ್ಥಿಯ ವಿರುದ್ಧ ಮಾಡಲಾದ ಆರೋಪವು ನಿಸ್ಸಂದಿಗ್ಧವಾಗಿ ರುಜುವಾತಾಗಿರುವುದರಿಂದ 1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಡೆಸುವಿಕೆ) ನಿಯಮಾವಳಿಗಳ ನಿಯಮ 14 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾದ ದಿನಾಂಕ:14.07.1993ರ ಆಯೋಗದ ಅಧಿಕೃತ ಜ್ಞಾಪನದನ್ವಯ ಆಪಾದಿತ ಅಭ್ಯರ್ಥಿಗೆ ಕೆಳಕಂಡ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಅದರಂತೆ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ(1)/1155/2003-04/ಪಿಎಸ್‌ಸಿ ದಿನಾಂಕ:29ನೇ ನವಂಬರ್, 2003**

1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಡೆಸುವಿಕೆ) ನಿಯಮಾವಳಿಗಳ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ದಿನಾಂಕ: 14.07.1993ರ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ:ಆಡಳಿತ:398/93-94/ಪಿಎಸ್‌ಸಿ ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾದಿತ ಅಭ್ಯರ್ಥಿಯಾದ ಶ್ರೀ ಗೋವಿಂದ ಜಾದವ್, ಮುಖ್ಯಾಧಿಕಾರಿ, ಪಟ್ಟಣ ಪಂಚಾಯಿತಿ, ಬೀಳಗಿ, ಬಾಗಲಕೋಟೆ ಜಿಲ್ಲೆ, ಇವರಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸಿದೆ.

1. ಆಯೋಗವು ಮುಂದೆ ನಡೆಸುವ ಯಾವುದೇ ಪರೀಕ್ಷೆಗೆ ಕೂರದಂತೆ ಶಾಶ್ವತವಾಗಿ ಡಿಬಾರ್ ಮಾಡಿದೆ: ಹಾಗೂ
2. ಇವರು ಎಸಗಿರುವ ದುರಾಚಾರದ ಬಗ್ಗೆ ಇವರ ವಿರುದ್ಧ ನಿಯಮಾವಳಿಗಳ ರೀತ್ಯ ಶಿಸ್ತಿನ ಕ್ರಮ ಕೈಗೊಳ್ಳುವಂತೆ ಇವರ ಇಲಾಖಾ ಮುಖ್ಯಸ್ಥರಿಗೆ ಶಿಫಾರಸ್ಸು ಮಾಡಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ,
ಬೆಂಗಳೂರು.

ಪಿ.ಆರ್. 803

**ಕರ್ನಾಟಕ ಲೋಕಸೇವಾ ಆಯೋಗದ ಕಛೇರಿ "ಪಾರ್ಕ್‌ಹೌಸ್", ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ: ಇಪ(1)/1232/2003-04/ಪಿಎಸ್‌ಸಿ, ಬೆಂಗಳೂರು, ದಿನಾಂಕ:16ನೇ ಡಿಸೆಂಬರ್, 2003**

ದಿನಾಂಕ: 13.11.2003ರ ಕರ್ನಾಟಕ ರಾಜ್ಯಪತ್ರದ ಭಾಗ-5ರಲ್ಲಿ ಪ್ರಕಟಿಸಲಾಗಿರುವ ಆಯೋಗದ ದಿನಾಂಕ:28.10.2003ರ ಅಧಿಸೂಚನೆ ಸಂಖ್ಯೆ: ಇಪ(1) 950/2003-04/ಪಿಎಸ್‌ಸಿ ರಲ್ಲಿನ 2003ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶಗಳಲ್ಲಿ 'ರಾಯಚೂರು' ಕೇಂದ್ರದ ಶೀರ್ಷಿಕೆ ಅಪೆಂಡಿಕ್ಸ್ "ಎ" ರ ಅಡಿಯಲ್ಲಿನ 'ಅಕೌಂಟ್ಸ್ ಲೋಯರ್' ವಿಷಯಕ್ಕೆ ಸಂಬಂಧಿಸಿದಂತೆ ನೋಂದಣಿ ಸಂಖ್ಯೆ: 35051 ಮತ್ತು 35067ರ ನಡುವೆ ನೋಂದಣಿ ಸಂಖ್ಯೆ: 35057 ಅನ್ನು ಹಾಗೂ 'ಜನರಲ್ ಲಾ ಭಾಗ-2' ರ ವಿಷಯಕ್ಕೆ ಸಂಬಂಧಿಸಿದಂತೆ ನೋಂದಣಿ ಸಂಖ್ಯೆ 35054 ಮತ್ತು 35114ರ ನಡುವೆ ನೋಂದಣಿ ಸಂಖ್ಯೆ: 35057 ಅನ್ನೂ ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ,
ಬೆಂಗಳೂರು.

ಪಿ.ಆರ್. 810

**ಲೋಕೋಪಯೋಗಿ ಇಲಾಖೆ**

**ಕಾರ್ಯನಿರ್ವಾಹಕ ಇಂಜನೀಯರವರ ಕಾರ್ಯಾಲಯ, ಲೋಕೋಪಯೋಗಿ ಇಲಾಖೆ, ಕಾರವಾರ ವಿಭಾಗ, ಕಾರವಾರ**

**ಟೆಂಡರ್ ಪ್ರಕಟಣೆ**

**(ದ್ವಿಲಖೋಟೆ ಪದ್ದತಿ)**

**ಸಂಖ್ಯೆ: ಟೆಂಡರ್:9:2003-04:3079, ದಿನಾಂಕ: 10ನೇ ಡಿಸೆಂಬರ್, 2003**

ಕರ್ನಾಟಕ ಸರ್ಕಾರದ ರಾಜ್ಯ ಪಾಲರ ಪರವಾಗಿ ಈ ಕೆಳಗೆ ನಮೂದಿಸಿದ ಕಾಮಗಾರಿಗಳನ್ನು ಕೈಗೊಳ್ಳಲು ನಿಗದಿತ ನಮೂನೆಯಲ್ಲಿ ಸೀಲು ಮಾಡಿದ ಎರಡು ಲಖೋಟೆಗಳಲ್ಲಿ ಐಟಂ ದರದ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಒಂದನೇ ದರ್ಜೆಯ ಗುತ್ತಿಗೆದಾರರಿಂದ ಮಾತ್ರ ಈ ಕೆಳಗೆ ಸಹಿ ಮಾಡಿದವರು

ಪಿಡಬ್ಲ್ಯೂಜಿ-65 ಮತ್ತು ಪಿಡಬ್ಲ್ಯೂಜಿ-66ರಲ್ಲಿಯ ನಿಬಂಧನೆಗೆ ಒಳಪಟ್ಟು ಕರೆದಿರುತ್ತಾರೆ. ಭರ್ತಿ ಮಾಡಿದ ಟೆಂಡರುಗಳನ್ನು ಕಾರ್ಯನಿರ್ವಾಹಕ ಇಂಜನೀಯರರು, ಲೋ.ಇ. ಕಾರವಾರ ವಿಭಾಗ, ಕಾರವಾರರವರ ಹಾಗೂ ಅಧೀಕ್ಷಕ ಇಂಜಿನೀಯರ್ ಲೋ.ಇ. ಧಾರವಾಡ ವೃತ್ತ, ಧಾರವಾಡರವರ ಕಛೇರಿಗಳಲ್ಲಿ ದಿನಾಂಕ: 20.01.2004ರ ಸಾಯಂಕಾಲ 4.00 ಘಂಟೆಯವರೆಗೆ ಸ್ವೀಕರಿಸಲಾಗುವುದು ಹಾಗೂ ಸ್ವೀಕೃತವಾದ ಟೆಂಡರುಗಳ ಟೆಕ್ನಿಕಲ್ ಬಿಡ್‌ಗಳನ್ನು ಸಾಧ್ಯವಾದರೆ ದಿನಾಂಕ: 21.01.2004ರಂದು ತೆರೆಯಲಾಗುವುದು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಮುಂಗಡ ಠೇವಣಿ (ರೂ. ಗಳಲ್ಲಿ) | ಕಾಮಗಾರಿ ಮುಗಿಸಲು ಕಾಲಾವಧಿ | ಖಾಲಿ ಟೆಂಡರು ಫಾರಂ ಬೆಲೆ ರೂ. ಗಳಲ್ಲಿ (ತೆರಿಗೆ ಸಹಿತ) | ಟೆಂಡರು ಫಾರಂಗಾಗಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ 5.30 ಘಂಟೆಯ ವರೆಗೆ. | ಟೆಂಡರು ಫಾರಂ ನೀಡುವ ದಿನಾಂಕ | ಭರ್ತಿ ಮಾಡಿದ ಟೆಂಡರು ಸಲ್ಲಿಸುವ ಕೊನೆಯ ದಿನಾಂಕ (4.00 ಘಂಟೆಯ ವರೆಗೆ ಮಾತ್ರ). |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | **ಸೇತುವೆ ಕೆಲಸ** | | | | | | | |
| 1. | ನಬಾರ್ಡ್ ಆರ್.ಐ.ಡಿ.ಎಫ್-9 ಯೋಜನೆಯಡಿ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕಿನ ಮಾವಿನಕುರ್ವಾ ಹೊಸಾಡ ರಸ್ತೆಗೆ ಅಡ್ಡಲಾಗಿ ಸೇತುವೆ ನಿರ್ಮಾಣ. | 138.00 | 138000 | 15 ತಿಂಗಳುಗಳು (ಹದಿನೈದು) ತಿಂಗಳುಗಳು ಮಳೆಗಾಲ ಸಹಿತ. | 5825/- | 12.01.04 ರಿಂದ 13.01.04 | 16.01.04 | 20.01.04 |
| | **ರಸ್ತೆ ಕೆಲಸ** | | | | | | | |
| 2. | ನಬಾರ್ಡ್ ಆರ್.ಐ.ಡಿ.ಎಫ್-9 ಯೋಜನೆಯಡಿ ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ತಾಲ್ಲೂಕಿನ ಬಾಚಣಕಿ ನ್ಯಾಸರಗಿ ಸನವಳ್ಳಿ, ಚಿಗಳ್ಳಿ, ಕಾತೂರು ರಸ್ತೆ ಸುಧಾರಣೆ | 105.50 | 106000 | 12 ತಿಂಗಳುಗಳು (ಹನ್ನೆರಡು) ತಿಂಗಳುಗಳು ಮಳೆಗಾಲ ಸಹಿತ. | 5825/- | 12.01.04 ರಿಂದ 13.01.04 | 16.01.04 | 20.01.04 |

ಪ್ರಕಟಣೆಯಲ್ಲಿ ಹೇಳಲಾದ ದಿನಾಂಕಗಳಲ್ಲಿ ಯಾವುದೇ ದಿನವು ರಜಾ ದಿನವೆಂದು ಘೋಷಿಸಿದಲ್ಲಿ ಮುಂದಿನ ಕಛೇರಿಯ ಕೆಲಸದ ದಿನವನ್ನು ಪರಿಗಣಿಸುವುದು. ಯಾವುದೇ ಗುತ್ತಿಗೆದಾರರ ಅರ್ಜಿಯನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಕಾರ್ಯನಿರ್ವಾಹಕ ಇಂಜನೀಯರರು, ಲೋ.ಇ. ಕಾರವಾರ ವಿಭಾಗ, ಕಾರವಾರ ಇವರಿಗೆ ಇರುತ್ತದೆ.

**ಲಖೋಟೆ (1) (ಅರ್ಹತೆಯನ್ನು ನಿರ್ಧರಿಸುವ ಭಾಗ)**

ಈ ಲಖೋಟೆಯಲ್ಲಿ ಕೆಳಗಿನ ವಿವರಗಳನ್ನು ಮತ್ತು ಪ್ರಮಾಣ ಪತ್ರಗಳನ್ನು ಮಾತ್ರ ಸೇರಿಸಿ ಸೀಲ್ ಮಾಡಿ ಸಲ್ಲಿಸತಕ್ಕದ್ದು.

1. ದೃಢೀಕೃತ ಕರ್ನಾಟಕ ಸರ್ಕಾರದ ಒಂದನೇ ದರ್ಜೆಯ ಗುತ್ತಿಗೆದಾರರ ನೋಂದಣಿ ಪತ್ರ.
2. ಮೇಲಿನ ಕೆಲಸಗಳ ಟೆಂಡರು ಮೊತ್ತದ ಶೇಕಡಾ 30ರ ಮೊತ್ತಕ್ಕೆ ಕಡಿಮೆ ಇರದಂತೆ ಇದೇ ಮಾದರಿಯ ಸೇತುವೆಯ ಕಾಮಗಾರಿಗಳನ್ನು (ಸೇತುವೆಗಾಗಿ ಅರ್ಜಿ ಸಲ್ಲಿಸುವುದಾದರೆ) ಹಾಗೂ ಇದೇ ಮಾದರಿಯ ರಸ್ತೆ ಕಾಮಗಾರಿಗಳನ್ನು (ಅಂದರೆ ಖಡೀಕರಣ, ಮಿಕ್ಸ್ ಸೀಲ್ ಮಾದರಿಯ ಡಾಂಬರೀಕರಣ) (ರಸ್ತೆ ಕೆಲಸಕ್ಕಾಗಿ ಅರ್ಜಿ ಸಲ್ಲಿಸುವುದಾದರೆ) ಕಳೆದ 5 ಆರ್ಥಿಕ ವರ್ಷಗಳಲ್ಲಿನ ಯಾವುದಾದರೂ ಒಂದು ಆರ್ಥಿಕ ವರ್ಷದ ಅವಧಿಯಲ್ಲಿ ಯಶಸ್ವಿಯಾಗಿ ಮಾಡಿ ಮುಗಿಸಿದ ಬಗ್ಗೆ ಸಂಬಂಧಿಸಿದ ಕಾರ್ಯನಿರ್ವಾಹಕ ಇಂಜನೀಯರರಿಂದ ಅಥವಾ ತತ್ಸಮ ಅಧಿಕಾರಿಯವರಿಂದ ಪಡೆದ ಪ್ರಮಾಣ ಪತ್ರ ಅಥವಾ

ಗುತ್ತಿಗೆದಾರರು ಶೇಖಡಾ 30 ರಷ್ಟು ಪ್ರಮಾಣದ ಮೇಲೆ ನಮೂದಿಸಿರುವ ಇದೇ ಮಾದರಿಯ ಕಾಮಗಾರಿ ನಿರ್ವಹಿಸುತ್ತಿರುವ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರ ಇರತಕ್ಕದ್ದು ಇಲ್ಲವಾದಲ್ಲಿ ಟೆಂಡರ್‌ಗಳು (ಟೆಕ್ನಿಕಲ್ ಬಿಡ್) ಅನರ್ಹಗೊಳ್ಳುತ್ತದೆ.

3. ಗುತ್ತಿಗೆದಾರರು ತಮ್ಮಲ್ಲಿ ಹೊಂದಿರುವ ಅಥವಾ ಲಭ್ಯವಿರುವ ಯಂತ್ರೋಪಕರಣಗಳ ವಿವರಗಳನ್ನು ನೀಡಬೇಕು. ಗುತ್ತಿಗೆದಾರರು ಸೇತುವೆ ಕಾಮಗಾರಿಗೆ ಅವಶ್ಯಕವಿರುವ ಸೆಂಟ್ರಿಂಗ್ ಸಾಮಾನುಗಳನ್ನು, ಕಾಂಕ್ರೀಟ್ ಮಿಕ್ಸರ್, ವೈಬ್ರೇಟರ್, ನೀರೆತ್ತುವ ಪಂಪುಗಳ ವಿವರಗಳನ್ನು ಹಾಗೂ ಅವುಗಳ ದಾಖಲಾತಿಗಳನ್ನು ತಪ್ಪದೇ ಸಲ್ಲಿಸಬೇಕು ಹಾಗೆಯೇ ರಸ್ತೆ ಕಾಮಗಾರಿಗೆ ಅವಶ್ಯವಿರುವ ರೋಡ್ ರೋಲರ್, ಹಾಟ್ ಮಿಕ್ಸ್ ಪ್ಲ್ಯಾಂಟ್, ಮೆಕ್ಯಾನಿಕಲ್ ಪೇವರ್, ನೀರೆತ್ತುವ ಪಂಪುಗಳು, ಕಾಂಕ್ರೀಟ್ ಮಿಕ್ಸರ್‌ಗಳ ವಿವರಗಳನ್ನು ಹಾಗೂ ಅವುಗಳ ದಾಖಲಾತಿಗಳನ್ನು ತಪ್ಪದೇ ಸಲ್ಲಿಸಬೇಕು. ದಾಖಲೆಗಳಿಲ್ಲದ ವಿವರಗಳನ್ನು ಪರಿಶೀಲಿಸಲಾಗುವುದಿಲ್ಲ.

4. ಗುತ್ತಿಗೆದಾರರು ಈಗಾಗಲೇ ವಹಿಸಿಕೊಂಡು ಮಾಡಿ ಮುಗಿಸಿದ ಅಥವಾ ಈಗ ಕೈಯಲ್ಲಿರುವ ಕಾಮಗಾರಿಗಳು ಮತ್ತು ಅವುಗಳ ಟೆಂಡರು ಮೊತ್ತದ ದೃಢೀಕೃತ ಪಟ್ಟಿ.

5. ಈ ಮೇಲಿನ ಆಯಾ ಕೆಲಸಗಳಿಗೆ ನಮೂದಿಸಿದ ಅವಶ್ಯವುಳ್ಳ ಇ.ಎಮ್.ಡಿ.ಯನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಲೋ.ಇ. ಕಾರವಾರ ವಿಭಾಗ, ಕಾರವಾರ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಪತ್ರಗಳು ಅಥವಾ ಸರಕಾರಿ ಖಜಾನೆಯ ಅಥವಾ ಉಪ-ಖಜಾನೆಯ ಚಲನ್/ ರಿಜರ್ವ್ ಬ್ಯಾಂಕಿನಿಂದ ಮಾನ್ಯತೆ ಪಡೆದ ಶೆಡ್ಯೂಲ್ ಬ್ಯಾಂಕಿನ ಇಲ್ಲವೇ ರಾಷ್ಟ್ರೀಕೃತ ಬ್ಯಾಂಕಿನಿಂದ ಕೊಡ ಮಾಡಿದ ನಿಗದಿತ ನಮೂನೆಯಲ್ಲಿನ ಬ್ಯಾಂಕ್ ಗ್ಯಾರಂಟಿ: ಕಾಲ್ ಡಿಪೋಜಿಟ್ ರಶೀದಿ ಅಥವಾ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು. ಇದನ್ನು ಬಿಟ್ಟು ಬಾಕಿ ಯಾವುದೇ ರೀತಿಯ ಇ.ಎಂ.ಡಿ ಸಲ್ಲಿಸಿದ ಟೆಂಡರನ್ನು ತಿರಸ್ಕರಿಸಲಾಗುವುದು ಒಂದು ವೇಳೆ ಗುತ್ತಿಗೆದಾರರು ಸ್ಥಳೀಯ ಶೆಡ್ಯೂಲ್ ಬ್ಯಾಂಕಿನಿಂದ ಇ.ಎಂ.ಡಿ. ಪಡೆದರೆ ಸದರಿ ಬ್ಯಾಂಕ್‌ಗಳು ಶೆಡ್ಯೂಲ್/ ರಾಷ್ಟ್ರೀಕೃತ ಬ್ಯಾಂಕ್ ಎಂದು ದೃಢೀಕರಣ ಪತ್ರವನ್ನು ಸಂಬಂಧಿಸಿದ ಬ್ಯಾಂಕ್‌ನಿಂದ ಪಡೆದು ತಪ್ಪದೇ ಇ.ಎಂ.ಡಿ ಸಂಗಡ ಲಗತ್ತಿಸಬೇಕು. (ಕಾರ್ಯನಿರ್ವಾಹಕ ಇಂಜಿನೀಯರರು, ಲೋ.ಇ. ಕಾರವಾರ ವಿಭಾಗ, ಕಾರವಾರ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿರಬೇಕು)

**ಲಖೋಟೆ (2) (ಹಣಕಾಸಿನ ಸವಾಲು) (ಫೈನಾನ್ಷಿಯಲ್ ಬಿಡ್)**

ಈ ಲಖೋಟೆಯಲ್ಲಿ ಲೋ.ಇ. ಕಾರವಾರ ವಿಭಾಗ, ಕಾರವಾರ ಕಛೇರಿಯಿಂದ ಕೊಡಲಾದ ಟೆಂಡರು ಪುಸ್ತಕಗಳಲ್ಲಿ ಗುತ್ತಿಗೆದಾರರು ತಮ್ಮ ದರಗಳನ್ನು ನಮೂದಿಸಿ ಯಾವುದೇ ಬದಲಾವಣೆ ಮಾಡದೇ ದ್ವಿಪ್ರತಿಗಳಲ್ಲಿ ಟೆಂಡರು ಪುಸ್ತಕಗಳನ್ನು ಮಾತ್ರ ಸೀಲ್ ಮಾಡಿ ಸಲ್ಲಿಸತಕ್ಕದ್ದು.

ಲಖೋಟೆ (1) ಮತ್ತು ಲಖೋಟೆ (2) ಎಂದು ನಿಚ್ಚಳವಾಗಿ ಲಖೋಟೆಯ ಮೇಲೆ ಕೆಲಸದ ಹೆಸರಿನೊಂದಿಗೆ ಬರೆಯತಕ್ಕದ್ದು.

ಮೊದಲು ಲಖೋಟೆ (1)ನ್ನು ನಿರ್ಧಾರಿತ ದಿನದಂದು ತೆರೆದು ಗುತ್ತಿಗೆದಾರರ ಅರ್ಹತೆಯನ್ನು ನಿರ್ಧರಿಸಲಾಗುವುದು. ಅರ್ಹತೆಯುಳ್ಳ ಗುತ್ತಿಗೆದಾರರ ಲಖೋಟೆ (2)ನ್ನು ಮಾತ್ರ ಸಂಬಂಧಿಸಿದ ಗುತ್ತಿಗೆದಾರರಿಗೆ ತಿಳಿಸಿ ತೆರೆಯಲಾಗುವುದು.

**ನಿಬಂಧನೆಗಳು**

1. ಮೇಲಿನ ಕೆಲಸಗಳಿಗೆ ಅರ್ಜಿ ಸಲ್ಲಿಸುವ ವೇಳೆಯಲ್ಲಿ ಗುತ್ತಿಗೆದಾರರು ಮೇಲಿನ ಕೆಲಸಗಳ ಟೆಂಡರ್ ಗಿಟ್ಟ ಮೊತ್ತದ ಶೇಕಡಾ 30ರ ಮೊತ್ತಕ್ಕೆ ಕಡಿಮೆ ಇರದಂತೆ ಇದೇ ಮಾದರಿಯ ಸೇತುವೆ ಹಾಗೂ ರಸ್ತೆ (ಅಂದರೆ ಖಡೀಕರಣ, ಮಿಕ್ಸ್ ಸೀಲ್ ಮಾದರಿಯ ಡಾಂಬರೀಕರಣ) ಕಾಮಗಾರಿಗಳನ್ನು ನಿರ್ವಹಿಸಿದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯ ಒಂದು ವರ್ಷದ ಅವಧಿಯಲ್ಲಿ ಯಶಸ್ವಿಯಾಗಿ ಮಾಡಿ ಮುಗಿಸಿದ ಬಗ್ಗೆ ಸಂಬಂಧಿಸಿದ ಕಾರ್ಯನಿರ್ವಾಹಕ ಇಂಜಿನೀಯರ್‌ವರಿಂದ ಅಥವಾ ತತ್ಸಮ ಅಧಿಕಾರಿಯವರಿಂದ ಪಡೆದ ಪ್ರಮಾಣ ಪತ್ರ, ಒಂದು ವೇಳೆ ಪ್ರಮಾಣ ಪತ್ರದ ನಕಲು ಪ್ರತಿ ಲಗತ್ತಿಸಿದರೆ ಎಲ್ಲಾ ದಾಖಲಾತಿಗಳನ್ನು ಗೆಜೆಟೆಡ್ ಅಧಿಕಾರಿಗಳಿಂದ ಅಥವಾ ನೋಟರಿ ಪಬ್ಲಿಕ್‌ರಿಂದ ದೃಢೀಕರಿಸಲ್ಪಟ್ಟಿರಬೇಕು ಇಲ್ಲವಾದಲ್ಲಿ ಯಾವುದೇ ಕಾರಣದಿಂದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

2. ತಾಂತ್ರಿಕ ಬಿಡ್‌ನಲ್ಲಿ ಲಗತ್ತಿಸಿರುವ ದಾಖಲೆಗಳನ್ನು ನೋಟರಿಯವರಿಂದ ದೃಢೀಕರಿಸಿರಬೇಕು. ಮೂಲ ದಾಖಲೆಗಳನ್ನು ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕದಂದು ತಪ್ಪದೇ ಪರಿಶೀಲನೆಗಾಗಿ ಹಾಜರುಪಡಿಸಬೇಕು. ದೃಢೀಕರಿಸಲಾಗದ ಪ್ರಮಾಣ ಪತ್ರಗಳನ್ನು ಪರಿಶೀಲಿಸಲಾಗುವುದಿಲ್ಲ.

ಹೆಚ್ಚಿನ ಮಾಹಿತಿಗಳು ಬೇಕಾದಲ್ಲಿ ಕಾರ್ಯನಿರ್ವಾಹಕ ಇಂಜನೀಯರರು, ಲೋ.ಇ. ಕಾರವಾರ ವಿಭಾಗ, ಕಾರವಾರ ಇವರ ಕಛೇರಿಯನ್ನು ಕೆಲಸದ ದಿನಗಳಲ್ಲಿ ಸಂಪರ್ಕಿಸಿ ವಿವರಗಳನ್ನು ಪಡೆಯಬಹುದು.

**ಎ.ಎನ್. ಜಾನ್ವೇಕರ**

ಪಿ.ಆರ್.804

ಕಾರ್ಯನಿರ್ವಾಹಕ ಇಂಜನೀಯರರು,
ಲೋಇ ಕಾರವಾರ ವಿಭಾಗ, ಕಾರವಾರ.

## ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಕಾರ್ಯಾಲಯ, ಲೋಕೋಪಯೋಗಿ ಇಲಾಖೆ ವಿಭಾಗ, ತುಮಕೂರು

### ಟೆಂಡರ್ ಪ್ರಕಟಣೆ

**ಸಂಖ್ಯೆ: ಕಾನಿಇಂ:ಲೋಇವಿ:ತು:ಡಿಜಿ-1:ಟೆಂಡರ್-19/2003-04, ದಿನಾಂಕ:11ನೇ ನವಂಬರ್, 2003**

ಲೋಕೋಪಯೋಗಿ ಇಲಾಖೆ ಸಂಹಿತೆ ಭಾಗ-11 ಪಿಡಬ್ಲ್ಯುಜಿ-65 ನಿಬಂಧನೆಗೊಳಪಟ್ಟು ಅರ್ಹ ದರ್ಜೆಯ ಲೋಕೋಪಯೋಗಿ ಇಲಾಖೆಯ ನೊಂದಾಯಿತ ಗುತ್ತಿಗೆದಾರರುಗಳಿಂದ ಕಾಮಗಾರಿಗಳಿಗೆ ಮೊಹರು ಮಾಡಲಾದ ಎರಡು ಲಕೋಟೆಯ ಪದ್ಧತಿಯಂತೆ ಕಾಮಗಾರಿಗಳಿಗೆ ಟೆಂಡರು ಸಲ್ಲಿಸಲು ಇಚ್ಛೆಯುಳ್ಳವರು ಮನವಿಯನ್ನು ಕಾಮಗಾರಿಯ ಎದುರು ನಮೂದಿಸಿರುವ ಮೊತ್ತದ ಡಿ.ಡಿ.ಯೊಂದಿಗೆ ಕಾರ್ಯಪಾಲಕ ಇಂಜಿನಿಯರ್, ಲೋಇ:ತುಮಕೂರು ವಿಭಾಗ, ತುಮಕೂರು ರವರ ಹೆಸರಿಗೆ ಜಮಾ ಮಾಡಿದಂತೆ ಕೆಳಗೆ ಸಹಿ ಮಾಡಿರುವ ಕಛೇರಿಗೆ ದಿನಾಂಕ: 12.01.2004 ರಂದು ಸಂಜೆ 5.00 ಗಂಟೆಯೊಳಗಾಗಿ ಮನವಿಯೊಂದಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ. ಕಾಮಗಾರಿಗೆ ಸಂಬಂಧಿಸಿದ ಮುದ್ರಿತ ದಾಸ್ತಾವೇಜುಗಳು, ಮುದ್ರಿತ ಕರಾರುಗಳು, ರೇಖಾ ಚಿತ್ರಗಳು, ಕಾಮಗಾರಿಗಳ ಪೂರ್ಣ ತಪಶೀಲು ಪರಿಮಾಣ ಇತ್ಯಾದಿಗಳಲ್ಲದೇ ಕರಾರು ಷರತ್ತುಗಳನ್ನೊಳಗೊಂಡ ಟೆಂಡರ್ ದಾಖಲಾತಿಗಳಿಗಾಗಿ ದಿನಾಂಕ:14.01.2004 ರಂದು ಬೆಳಿಗ್ಗೆ 10.00 ರಿಂದ ಸಂಜೆ 5.00 ಗಂಟೆಯೊಳಗಾಗಿ ಪಡೆಯಬಹುದು ಅಗತ್ಯವಿರುವ ಪೂರ್ವ ಅರ್ಹತೆಗಳನ್ನು ಟೆಂಡರ್ ದಾಸ್ತಾವೇಜು ಸವಿವರವಾಗಿ ನಮೂದಿಸಲಾಗಿರುತ್ತದೆ.

ಗುತ್ತಿಗೆದಾರರು ಸ್ವತಃ ಕಾಂಕ್ರೀಟ್ ಮಿಕ್ಸರ್ಸ್ ಎರಡು ಸಂಖ್ಯೆ ಲಾರಿಗಳು, ನಾಲ್ಕು ಸಂಖ್ಯೆ ಮೆಕ್ಯಾನಿಕಲ್ ವೈಬ್ರೇಟರ್, ಎರಡು ಸಂಖ್ಯೆ ಸೆಂಟ್ರಿಂಗ್ ಸಾಮಗ್ರಿಗಳು ಹಾಗೂ ಇತರೆ ಅಗತ್ಯ ಯಂತ್ರೋಪಕರಣಗಳನ್ನು ಹೊಂದಿದ್ದು ಕಟ್ಟಡ ಕೆಲಸದಲ್ಲಿ ಅನುಭವ ಹೊಂದಿರಬೇಕು, ಮತ್ತು ಟೆಂಡರ್‌ಗಿಟ್ಟಿರುವ ಮೊತ್ತದಲ್ಲಿ ಶೇಕಡ 30 ಭಾಗದ ಕಟ್ಟಡದ ಕೆಲಸಗಳನ್ನು ಕಳೆದ ಸಾಲಿನಲ್ಲಿ ಕೈಗೊಂಡು ಪೂರೈಸಿರಬೇಕು. ಕಾಮಗಾರಿಗೆ ನಿಗದಿಪಡಿಸಿದ ಮುಂಗಡ ಠೇವಣಿಯನ್ನು ಕರ್ನಾಟಕ ಸರ್ಕಾರದ ಟ್ರೆಜರಿ ಚಲನ್ ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಹೆಸರಿಗೆ ಜಮಾ ಮಾಡಬಹುದಾದಂತೆ ಡಿಮ್ಯಾಂಡ್ ಡ್ರಾಫ್ಟ್ ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಒತ್ತೆ ಇಟ್ಟಿರುವ ಕಾಲಾವಧಿ ಠೇವಣಿಗಳು, (ರಾಷ್ಟ್ರೀಕೃತ ಬ್ಯಾಂಕುಗಳಿಗೆ ಸಂಬಂಧಪಟ್ಟಿರುವವುಗಳು ಮಾತ್ರ) ರಾಷ್ಟ್ರೀಯ ಉಳಿತಾಯ ಪತ್ರಗಳು ಮತ್ತು ಬ್ಯಾಂಕ್ ಗ್ಯಾರಂಟಿಯ ರೂಪದಲ್ಲಿ ಭರ್ತಿ ಮಾಡಿದ ಟೆಂಡರ್‌ನೊಂದಿಗೆ ದಿನಾಂಕ: 19.01.2004 ರಂದು ಸಂಜೆ 4.00 ಗಂಟೆಯೊಳಗಾಗಿ ತುಮಕೂರು ಲೋಕೋಪಯೋಗಿ ಇಲಾಖಾ ವಿಭಾಗದ ಕಛೇರಿಯಲ್ಲಾಗಲೀ ಅಥವಾ ಲೋಕೋಪಯೋಗಿ ಇಲಾಖೆ, ಬೆಂಗಳೂರು ವೃತ್ತ, ಅಧೀಕ್ಷಕ ಇಂಜಿನಿಯರ್‌ರವರ ಕಛೇರಿಯಲ್ಲಾಗಲೀ ಅಥವಾ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದ), ಬೆಂಗಳೂರು ರವರ ಕಛೇರಿಯಲ್ಲಾಗಲೀ ಸ್ವೀಕರಿಸಲಾಗುವುದು. ನಿಬಂಧನೆಗಳಿಗೊಳಪಟ್ಟು ಅಥವಾ ಮೇಲಿನ ಯಾವುದೇ ಷರತ್ತುಗಳನ್ನು ಪೂರ್ಣಗೊಳಿಸದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಮೇಲೆ ನಿಗದಿಪಡಿಸಿರುವ ಯಾವುದೇ ದಿನಾಂಕಗಳಂದು ಸರ್ಕಾರಿ ರಜಾ ದಿನಗಳೆಂದು ಘೋಷಿಸಲ್ಪಟ್ಟಲ್ಲಿ ಮುಂದಿನ ಕೆಲಸದ ದಿನಗಳನ್ನು ಪರಿಗಣಿಸಲಾಗುವುದು. ಗುತ್ತಿಗೆದಾರರು ಮನವಿ ಪತ್ರದ ಜೊತೆಯಲ್ಲಿ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಲ್ಪಟ್ಟ ನೋಂದಣಿ ಪತ್ರವನ್ನು ಲಗತ್ತಿಸಬೇಕು.

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಲಕ್ಷ ರೂ. ಗಳಲ್ಲಿ) | ಟೆಂಡರ್‌ಗಿಡುವ ಸರಿಸುಮಾರು ಮೊಬಲಗು (ಲಕ್ಷ ರೂಗಳಲ್ಲಿ) | ಸಲ್ಲಿಸಬೇಕಾದ ಠೇವಣಿ ಹಣ | ಕಾಮಗಾರಿ ಪೂರ್ಣಗೊಳಿಸಬೇಕಾದ ಕಾಲಾವಧಿ ಮಳೆಗಾಲ ಸೇರಿ | ಅರ್ಹ ದರ್ಜೆ ಗುತ್ತಿಗೆದಾರರು | ಟೆಂಡರ್ ಫಾರಂ ಬೆಲೆ ತೆರಿಗೆ (ಫಾರಂ ಬೆಲೆ ಹಿಂದಿರುಗಿಸಲಾಗುವುದಿಲ್ಲ.) |
|---|---|---|---|---|---|---|---|
| 1. | ತುಮಕೂರು ನಗರದ ಸಿದ್ಧಿವಿನಾಯಕ ತರಕಾರಿ ಮಾರುಕಟ್ಟೆಯ ಪುನರ್ ನಿರ್ಮಾಣ ಕಾಮಗಾರಿ | 240.00 | 216.80 | 216800 | 15 ತಿಂಗಳು | 1ನೇ ದರ್ಜೆ | 22000+ತೆರಿಗೆಗಳು |

**ಟೆಂಡರ್ ದಾಸ್ತಾವೇಜು ಸಲ್ಲಿಕೆಗೆ ನಿಗದಿಪಡಿಸಿರುವ ದಿನಾಂಕಗಳು**

1. ಖಾಲಿ ಟೆಂಡರ್ ಫಾರಂಗೆ ಮನವಿಯನ್ನು ಸಲ್ಲಿಸುವ ಕೊನೆಯ ದಿನಾಂಕ: 12.01.2004ರ ಸಂಜೆ 5.00 ಗಂಟೆವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಗುತ್ತಿಗೆದಾರರಿಗೆ ನೀಡಲು ಕೊನೆಯ ದಿನಾಂಕ:14.01.2004ರ ಸಂಜೆ 5.00 ಗಂಟೆಯವರೆಗೆ.
3. ತಾಂತ್ರಿಕ ಮತ್ತು ಆರ್ಥಿಕ ಬಿಡ್‌ಗಳನ್ನು ಕಛೇರಿಗೆ ಸಲ್ಲಿಸಲು ಕೊನೆಯ ದಿನಾಂಕ:19.01.2004ರ ಸಂಜೆ 4.00 ಗಂಟೆಯವರೆಗೆ.
4. ತಾಂತ್ರಿಕ ಬಿಡ್‌ಗಳನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿಯಲ್ಲಿ ತೆರೆಯುವ ದಿನಾಂಕ:19.01.2004ರ ಸಂಜೆ 5.00 ಗಂಟೆಗೆ ಅಥವಾ ಮುಂದಿನ ಸೂಕ್ತವಾದ ದಿನಾಂಕದಂದು ತೆರೆಯಲಾಗುವುದು.

## “ವಿಶೇಷ ಸೂಚನೆಗಳು”

1. ಯಾವ ಕಾರಣವನ್ನೂ ಸಹಾ ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ನಿರಾಕರಿಸುವ ಅಧಿಕಾರವನ್ನು ಟೆಂಡರ್ ಸ್ವೀಕರಿಸುವ ಅಧಿಕಾರಿಯವರು ಕಾದಿರಿಸಿಕೊಂಡಿರುತ್ತಾರೆ.
2. ಮೇಲೆ ನಮೂದಿಸಿರುವ ಷರತ್ತುಗಳಿಗನುಗುಣವಾಗಿ ಮುಂಗಡ ಠೇವಣಿ ಸಲ್ಲಿಸದೇ ಇರುವ ಟೆಂಡರ್‌ಗಳನ್ನು ನೇರವಾಗಿ ತಿರಸ್ಕರಿಸಲಾಗುವುದು.
3. ಖಾಲಿ ಟೆಂಡರ್ ಫಾರಂಗಳಿಗಾಗಿ ಮನವಿಯನ್ನು ಸಲ್ಲಿಸುವಾಗ ಅರ್ಹ ದರ್ಜೆಯಲ್ಲಿ ನೊಂದಾಯಿತರಾಗಿರುವ ಬಗ್ಗೆ ಪ್ರಮಾಣ ಪತ್ರ ಮತ್ತು ಗುತ್ತಿಗೆದಾರರ ದಾಖಲಾತಿ ಪುಸ್ತಕ (ಪಾಸ್ ಬುಕ್) ಗಳನ್ನು ಸಲ್ಲಿಸಿ ದಾಖಲಾತಿ ಮಾಡಿಸಿಕೊಳ್ಳಬೇಕು.
4. ಅರ್ಜಿ ಸಲ್ಲಿಸುವಾಗ ಅವರು ನಿರ್ವಹಿಸುತ್ತಿರುವ ಕಾಮಗಾರಿಗಳ ಪಟ್ಟಿಗಳನ್ನು ಮತ್ತು ಪೂರ್ಣಗೊಳಿಸಿದ ಕಾಮಗಾರಿಗಳ ಬಗ್ಗೆ ಪ್ರಮಾಣ ಪತ್ರವನ್ನು ಲಗತ್ತಿಸಬೇಕು. ಇಲ್ಲವಾದಲ್ಲಿ ಅರ್ಜಿಯನ್ನು ನೇರವಾಗಿ ತಿರಸ್ಕರಿಸಲಾಗುವುದು.
5. ಗುತ್ತಿಗೆದಾರರೇ ಸ್ವತಃ ಸಿಮೆಂಟ್, ಉಕ್ಕು, ಡಾಂಬರ್ ಮುಂತಾದವುಗಳನ್ನು ಒದಗಿಸಿಕೊಂಡು ಇಲಾಖಾ ನಿಯಮಾವಳಿಗಳ ಪ್ರಕಾರ ಕೆಲಸವನ್ನು ಪೂರ್ಣಗೊಳಿಸಬೇಕು ಮತ್ತು ಗುತ್ತಿಗೆದಾರರು ಸಾಮಗ್ರಿಗಳನ್ನು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
6. ಟೆಂಡರ್ ಫಾರಂಗಳನ್ನು ಪಡೆಯುವ ಸಂದರ್ಭದಲ್ಲಿ ಮತ್ತು ಟೆಂಡರ್ ಸಲ್ಲಿಸುವ ಸಮಯದಲ್ಲಿ ಪಾಸ್‌ಬುಕ್‌ನಲ್ಲಿ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು.
7. ಮೇಲಿನ ಕಾಮಗಾರಿಗೆ ಅರ್ಜಿ ಸಲ್ಲಿಸುವ ಗುತ್ತಿಗೆದಾರರು, ಅದೇ ರೀತಿಯ ಕಾಮಗಾರಿಯನ್ನು (ಎ) ಕಾಮಗಾರಿಗೆ ನಿಗದಿಪಡಿಸಿದ ಮೊತ್ತದಲ್ಲಿ ಶೇಕಡ 30 ರಷ್ಟು ಮೊತ್ತಕ್ಕೆ ಹಿಂದಿನ ಆರ್ಥಿಕ ವರ್ಷದಲ್ಲಿ ಕೈಗೊಂಡು ಪೂರೈಸಿರಬೇಕು ಅಥವಾ (ಬಿ) ಹಿಂದಿನ ಐದು ವರ್ಷಗಳ ಕಾಲಾವಧಿಯಲ್ಲಿ ಕನಿಷ್ಠ ಶೇಕಡ 10ರಂತೆ ಒಟ್ಟು ಕಾಮಗಾರಿಗೆ ನಿಗದಿಪಡಿಸಿರುವ ಮೊತ್ತದ ಶೇಕಡ 30ರಷ್ಟು ಮೊತ್ತದ ಕೆಲಸವನ್ನು ಕೈಗೊಂಡು ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಗಳ ದೃಢೀಕರಣ ಪತ್ರವನ್ನು ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಒದಗಿಸಬೇಕು.
8. ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದಿರಬಾರದು, ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಯನ್ನು ವಿಳಂಬವಾಗಿ ಪೂರೈಸಿರಬಾರದು. ಇಂತಹ ಗುತ್ತಿಗೆದಾರರ ಅರ್ಜಿಗಳನ್ನು ನೇರವಾಗಿ ತಿರಸ್ಕರಿಸಲಾಗುವುದು. ಒಂದು ವೇಳೆ ಗುತ್ತಿಗೆ ಅವಧಿ ಪೂರ್ಣಗೊಂಡಿದ್ದರೂ ಕಾಮಗಾರಿ ಪೂರ್ಣಗೊಳಿಸದಿದ್ದಲ್ಲಿ, ಕುಂಠಿತವಾಗಿದ್ದಲ್ಲಿ ಅಂತಹ ಗುತ್ತಿಗೆದಾರರ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
9. ಮೇಲಿನ ಕೆಲಸಗಳಿಗೆ ಬೇಕಾದ ಅಗತ್ಯವಾದ ಕಾಂಕ್ರೀಟ್ ಮಿಕ್ಸರ್, ವೈಬ್ರೇಟರ್, ಸೆಂಟ್ರಿಂಗ್ ಸಾಮಗ್ರಿಗಳು, ಲಾರಿಗಳು ಹಾಗೂ ಇತರೆ ಅವಶ್ಯಕ ಯಂತ್ರೋಪಕರಣಗಳನ್ನು ಸ್ವಂತವಾಗಿ ಹೊಂದಿರತಕ್ಕದ್ದು ಅಥವಾ ಹೊಂದಿಸಿಕೊಂಡು ಕೆಲಸ ನಿರ್ವಹಿಸುವ ಬಗ್ಗೆ ದಾಖಲಾತಿ ಅರ್ಜಿ ಸಲ್ಲಿಸುವ ಸಮಯದಲ್ಲೇ ಒದಗಿಸತಕ್ಕದ್ದು. ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
10. ಗುತ್ತಿಗೆದಾರರು ಮೂರು ವರ್ಷದವರೆಗೆ ಪೂರೈಸಿದ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.
11. ಗುತ್ತಿಗೆದಾರರು ಟೆಂಡರ್ ಸಲ್ಲಿಸುವಾಗ ಲಕೋಟೆ ಮೇಲೆ ಮತ್ತು ‘ಬಿ’ ಷೆಡ್ಯೂಲ್‌ನಲ್ಲಿ ತಮ್ಮ ಪೂರ್ಣ ವಿಳಾಸವನ್ನು ನಮೂದಿಸಬೇಕು. ಇಲ್ಲವಾದಲ್ಲಿ ನೇರವಾಗಿ ತಿರಸ್ಕರಿಸಲಾಗುವುದು.
12. ಗುತ್ತಿಗೆದಾರರು ಟೆಂಡರ್ ಸಲ್ಲಿಸುವಾಗ ‘ಬಿ’ ಷೆಡ್ಯೂಲ್‌ನಲ್ಲಿ ದರಗಳನ್ನು ನಮೂದಿಸುವಾಗ ಸ್ಪಷ್ಟವಾಗಿ ಒಂದೇ ರೀತಿಯ ಬರವಣಿಗೆಯಲ್ಲಿ ಪ್ರತೀ ಪುಟಕ್ಕೂ ಸಹಿಯೊಂದಿಗೆ ಯಾವುದೇ ರೀತಿಯ ವ್ಯತ್ಯಾಸವಾಗದಂತೆ ನಮೂದಿಸಬೇಕು. ಇಲ್ಲವಾದಲ್ಲಿ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
13. ಟೆಂಡರ್‌ದಾರರು ಜಂಟಿಯಾಗಿ (ಇನ್ನೋರ್ವ ಗುತ್ತಿಗೆದಾರರೊಂದಿಗೆ) ಭಾಗವಹಿಸಲು ಅವಕಾಶವಿಲ್ಲ.

ಕಾರ್ಯನಿರ್ವಾಹಕ ಇಂಜಿನಿಯರ್,

ಪಿ.ಆರ್. 795 ಲೋಕೋಪಯೋಗಿ ಇಲಾಖೆ ವಿಭಾಗ, ತುಮಕೂರು.

**ಕರ್ನಾಟಕ ವಿಧಾನ ಸಭೆಯ ಸಚಿವಾಲಯ**

**ಶಾಸಕರ ಭವನ, ಬೆಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಶಾಭ:42:ಅದೂ:ನಿ: 2003, ದಿನಾಂಕ:12ನೇ ಡಿಸೆಂಬರ್, 2003**

**ವಿಷಯ:** ಶಾಸಕರ ಭವನದಲ್ಲಿ (ವಿಧಾನ ಸಭೆ) ಆಂತರಿಕ ದೂರವಾಣಿ ವ್ಯವಸ್ಥೆಯನ್ನು ವಾರ್ಷಿಕ ನಿರ್ವಹಣೆ ಒಪ್ಪಂದದ ಪ್ರಕಾರ ನಿರ್ವಹಿಸಲು ಟೆಂಡರ್ ಸಲ್ಲಿಸುವ ಬಗ್ಗೆ.

ಕರ್ನಾಟಕ ವಿಧಾನ ಸಭೆಯ ಸಚಿವಾಲಯದ ವ್ಯಾಪ್ತಿಯಲ್ಲಿರುವ ಶಾಸಕರ ಭವನದಲ್ಲಿ ಪ್ಯಾನಾಸೋನಿಕ್ ಡಿಜಿಟಲ್ ಹೈಬ್ರೀಡ್ ಐಎಸ್‌ಡಿಎಸ್ ಕಾಮ್‌ಪಿಟಬಲ್ ಸಿಸ್ಟಮ್ಸ್ ಕೆಎಕ್ಸ್ ಟಿಡಿ 520 ಬಿಎಕ್ಸ್ ಟಿ 50170 ಸಿಂಗಲ್ ಲೈನ್ ಟೆಲಿಫೋನ್ ಆಂತರಿಕ ದೂರವಾಣಿ ವ್ಯವಸ್ಥೆಯನ್ನು ಹಾಗೂ ಸುಮಾರು 200 ಆಂತರಿಕ ದೂರವಾಣಿ ಸಂಪರ್ಕಗಳೊಂದಿಗೆ ಡಿಸೆಂಬರ್ 2000ರಲ್ಲಿ ಅಳವಡಿಸಲಾಗಿದೆ. ಸದರಿ ವ್ಯವಸ್ಥೆಯನ್ನು ವಾರ್ಷಿಕ ಒಪ್ಪಂದದ ಆಧಾರದ ಮೇಲೆ ನಿರ್ವಹಿಸಲು ಈ ಕ್ಷೇತ್ರದಲ್ಲಿ ಹೆಚ್ಚಿನ ಅನುಭವವುಳ್ಳ ಸಂಸ್ಥೆಯವರಿಂದ ದರಪಟ್ಟಿಯನ್ನು ಆಹ್ವಾನಿಸಲಾಗಿದೆ. ಅನುಭವಕ್ಕೆ ಸಂಬಂಧಿಸಿದಂತೆ ದಾಖಲೆಗಳ ಜೆರಾಕ್ಸ್ ಪ್ರತಿಗಳೊಂದಿಗೆ ಮೊಹರು ಮಾಡಿದ ಲಕೋಟೆಗಳಲ್ಲಿ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಕೊಠಡಿ ಸಂಖ್ಯೆ:121, ಮೊದಲನೇ ಮಹಡಿ, ವಿಧಾನ ಸೌಧ ಬೆಂಗಳೂರು-560 001 ಇವರಿಗೆ ದಿನಾಂಕ: 29.12.2003 ರಂದು ಸಂಜೆ: 4.00 ಗಂಟೆಯೊಳಗಾಗಿ ಸಲ್ಲಿಸಲು ಕೋರಲಾಗಿದೆ.

**ಸೂಚನೆಗಳು**

1. ಡಿ.ಡಿ.: ಪೇ ಆರ್ಡರ್ ಮೂಲಕ ಟೆಂಡರ್ ಜೊತೆಯಲ್ಲಿ ರೂ. 10,000-00 ಗಳ ಠೇವಣಿಯನ್ನು ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು-560 001. ಇವರ ಹೆಸರಿಗೆ ಸಂದಾಯವಾಗುವಂತೆ ಲಗತ್ತಿಸಬೇಕು. ಆಯ್ಕೆಯಾದ ಟೆಂಡರ್‌ದಾರರನ್ನು ಹೊರತುಪಡಿಸಿ ಉಳಿದವರಿಗೆ ಠೇವಣಿಯನ್ನು ಹಿಂದಿರುಗಿಸಲಾಗುವುದು. ಠೇವಣಿಯನ್ನು ಸಲ್ಲಿಸದಿರುವ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ. ಆಯ್ಕೆಯಾದ ಟೆಂಡರ್‌ದಾರರ ಠೇವಣಿ ಹಣವನ್ನು ಟೆಂಡರ್ ಅವಧಿ ಮುಗಿದ ನಂತರ ಹಿಂತಿರುಗಿಸಲಾಗುತ್ತದೆ.
2. ಆಂತರಿಕ ದೂರವಾಣಿ ನಿರ್ವಹಣೆ ಸಂಬಂಧಿಸಿದಂತೆ ಹೊಂದಿರುವ ಅನುಭವ ದೃಢೀಕರಣದ ಜೆರಾಕ್ಸ್ ಪ್ರತಿಗಳನ್ನು ಲಗತ್ತಿಸಿರಬೇಕು ಹಾಗೂ ಯಾವ ಯಾವ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸಲಾಗುತ್ತಿದೆ ಎಂಬ ಬಗ್ಗೆಯೂ ಸಹ ದಾಖಲೆಗಳನ್ನು ಲಗತ್ತಿಸಿರಬೇಕು.
3. ಟೆಂಡರ್‌ಗಳನ್ನು ದಿನಾಂಕ: 30.12.03 ರಂದು ಮಧ್ಯಾಹ್ನ 3.00 ಗಂಟೆಗೆ ಕಾರ್ಯದರ್ಶಿ ಕರ್ನಾಟಕ ವಿಧಾನಸಭೆ, ಕೊಠಡಿ ಸಂಖ್ಯೆ: 121 ಮೊದಲನೇ ಮಹಡಿ, ವಿಧಾನಸೌಧ, ಬೆಂಗಳೂರು-560 001 ಇವರ ಕಛೇರಿಯಲ್ಲಿ ತೆರೆಯಲಾಗುವುದು.
4. ವಾರ್ಷಿಕ ನಿರ್ವಹಣೆ ಒಪ್ಪಂದದಲ್ಲಿ ಯಾವ ಯಾವ ಕೆಲಸಗಳನ್ನು ಒಳಗೊಂಡಿರುತ್ತದೆ ಎಂದು ಸ್ಪಷ್ಟವಾಗಿ ನಮೂದಿಸಿರಬೇಕು.
5. ಆಂತರಿಕ ದೂರವಾಣಿ ವ್ಯವಸ್ಥೆಗೆ ಸಂಬಂಧಿಸಿದಂತೆ ಯಾವ ಯಾವ ಕೆಲಸಗಳಿಗಾಗಿ ಪ್ರತ್ಯೇಕವಾಗಿ ದರ ವಿಧಿಸಲಾಗುವುದು ಎಂಬುದನ್ನು ನಮೂದಿಸಿರಬೇಕು.
6. ಆಯ್ಕೆಯಾದ ಟೆಂಡರ್‌ದಾರರಿಗೆ ಒಂದು ವರ್ಷದ ಅವಧಿಗೆ ಆಂತರಿಕ ದೂರವಾಣಿ ವ್ಯವಸ್ಥೆ ನಿರ್ವಹಿಸಲು ಪರವಾನಗಿ ನೀಡಲಾಗುವುದು.
7. ಅಂಗೀಕರಿಸಿದ ಮೊತ್ತವನ್ನು ಎರಡು ಸಮಾನ ಕಂತುಗಳಲ್ಲಿ ನೀಡಲಾಗುವುದು ಮೊದಲನೇ ಕಂತನ್ನು 6 ತಿಂಗಳು ಮುಕ್ತಾಯದ ನಂತರ ಹಾಗೂ ಎರಡನೇ ಕಂತನ್ನು ಒಪ್ಪಂದ ಮುಕ್ತಾಯವಾದ ನಂತರ ನೀಡಲಾಗುವುದು.
8. ಟೆಂಡರ್‌ಗಳನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಸನ್ಮಾನ್ಯ ಸಭಾಧ್ಯಕ್ಷರವರು ಹೊಂದಿರುತ್ತಾರೆ.

ಹೆಚ್ಚಿನ ಮಾಹಿತಿಗಾಗಿ ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಸಚಿವಾಲಯ, ಕೊಠಡಿ ಸಂಖ್ಯೆ: 121, ಮೊದಲನೇ ಮಹಡಿ, ವಿಧಾನಸೌಧ, ಬೆಂಗಳೂರು ಅಥವಾ ಕ್ಷೇತ್ರಾಧಿಕಾರಿ, ಶಾಸಕರ ಭವನ, ಬೆಂಗಳೂರು ಇವರನ್ನು ಸಂಪರ್ಕಿಸಬಹುದು.

**ಟಿ. ರಾಜಣ್ಣ**

ಪಿ.ಆರ್.805 ಕಾರ್ಯದರ್ಶಿ,

ಕರ್ನಾಟಕ ವಿಧಾನ ಸಭೆಯ ಸಚಿವಾಲಯ.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು (ಪ್ರಾದೇಶಿಕ)ರವರ ಕಛೇರಿ, ಚಿತ್ರದುರ್ಗ**

**ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ:ಎ6/ರಸ್ತೆ ಬದಿ. ಸಿಆರ್-38/2001-02, ದಿನಾಂಕ:4ನೇ ಡಿಸೆಂಬರ್, 2003**

**ವಿಷಯ:** ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ವಿಶ್ವ ಬ್ಯಾಂಕ್ ಸಹಕಾರಿ) ಹಂತ-2ರಲ್ಲಿ ರಸ್ತೆಗಳ ಅಗಲೀಕರಣಕ್ಕೆ ಸಂಬಂಧಿಸಿದಂತೆ ಮೊಳಕಾಲ್ಮೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಾರಿಡಾರ್ ಆಫ್ ಇಂಪ್ಯಾಕ್ಟ್‌ನ ಒಳಗಡೆ ಬರುವ ವಿವಿಧ ಜಾತಿಯ ಮರಗಳನ್ನು ವಿಲೇ ಮಾಡಿಕೊಡಲು ಬಹಿರಂಗ ಹರಾಜು ಪ್ರಕಟಣೆ ಹೊರಡಿಸುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಚಿತ್ರದುರ್ಗ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಬರುವ **ಹಿರಿಯೂರು-ಬಳ್ಳಾರಿ** ರಾಜ್ಯ ಹೆದ್ದಾರಿ ಅಗಲೀಕರಣಕ್ಕೆ ಸಂಬಂಧಿಸಿದಂತೆ ಮೊಳಕಾಲ್ಮೂರು ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಹಾನಗಲ್ ವೃತ್ತದಿಂದ ಕಿ.ಮೀ 0 ಎಂದು ಪರಿಗಣಿಸಿ ಹಾನಗಲ್ ವೃತ್ತದಿಂದ ತಮ್ಮೇನಹಳ್ಳಿ ಜಿಲ್ಲಾ ಗಡಿವರೆಗೆ ಕಿ.ಮೀ. 00 ರಿಂದ 30 ರವರೆಗಿನ ರಸ್ತೆಯ ಅಗಲೀಕರಣದೊಳಗೆ ಬರುವ ಕಾರಿಡಾರ್ ಆಫ್ ಇಂಪ್ಯಾಕ್ಟ್‌ನಲ್ಲಿ ಬೆಳೆದು ನಿಂತಿರುವ ವಿವಿಧ ಜಾತಿಯ ಮರಗಳನ್ನು ವಿಲೇವಾರಿ ಮಾಡಲು

ದಿನಾಂಕ: 21.01.2004 ರಂದು ಮೊಳಕಾಲ್ಮೂರು ವಲಯದಲ್ಲಿ ಎಂ.ಡಿ. ಮಹದೇವ ಸಸ್ಯಕ್ಷೇತ್ರದ ಆವರಣದಲ್ಲಿ ಬಹಿರಂಗ ಹರಾಜು ಮಾಡಲು ದಿನಾಂಕವನ್ನು ನಿಗದಿಪಡಿಸಲಾಗಿದೆ.

ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಾಗಲಿ ಅಥವಾ ಅವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟ ಅಧಿಕಾರಿಗಳಾಗಲಿ ಈ ಕೆಳಗೆ ನಮೂದಿಸಿರುವ ಷರತ್ತಿಗೊಳಪಟ್ಟು ಬಹಿರಂಗ ಹರಾಜು ನಡೆಸಲಾಗುವುದು. ಇಚ್ಛೆಯುಳ್ಳವರು ಈ ಹರಾಜಿನಲ್ಲಿ ಭಾಗವಹಿಸುವುದು. ಸದರಿ ಬಹಿರಂಗ ಹರಾಜನ್ನು ಅನುಸೂಚಿಯಲ್ಲಿ ನಮೂದಿಸಿರುವ ಸ್ಥಳದಲ್ಲಿ ಮೇಲ್ಕಂಡ ದಿನಾಂಕದಂದು ನಡೆಸಲಾಗುವುದು.

ದಿನಾಂಕ: 21.01.2004 ರಂದು ಮೊಳಕಾಲ್ಮೂರು ವಲಯದಲ್ಲಿ ಎಂ.ಡಿ. ಮಹದೇವ ಸಸ್ಯಕ್ಷೇತ್ರದ ಆವರಣದಲ್ಲಿ ನಡೆಸುವ ಬಹಿರಂಗ ಹರಾಜಿನಲ್ಲಿ ಬಿಡ್‌ದಾರರು ಭಾಗವಹಿಸದೆ ಇದ್ದಲ್ಲಿ ಅಥವಾ ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಮರು ಹರಾಜನ್ನು ದಿನಾಂಕ:29.01.2004 ರಂದು ನಡೆಸಲಾಗುವುದು. ನಂತರದ ಎರಡನೆಯ ಮರು ಹರಾಜನ್ನು ದಿನಾಂಕ:05.02.2004 ರಂದು ನಡೆಸಲಾಗುವುದು. ಈ ಹರಾಜುಗಳಿಗಾಗಿ ಪುನಃ ಯಾವುದೇ ರೀತಿಯ ಪ್ರಕಟಣೆ ಹೊರಡಿಸಲಾಗುವುದಿಲ್ಲ.

**ಅನುಸೂಚಿ**

| ರಸ್ತೆಯ ಹೆಸರು | ಯುನಿಟ್ ಸಂಖ್ಯೆ | ಕಿ.ಮೀ | ಮರಗಳ ಸಂಖ್ಯೆ | ಅಂದಾಜು ಉತ್ಪನ್ನ ಪ್ರಮಾಣ | | ಬಹಿರಂಗ ಹರಾಜು ಮಾಡುವ ಸ್ಥಳ/ ವೇಳೆ |
|---|---|---|---|---|---|---|
| | | | | ಟಿಂಬರ್ (ಕ್ಯೂ.ಮೀ) | ಉರುವಲು (ಟನ್) | |
| 1 | 2 | 3 | 4 | 5 | 6 | 7 |
| ಹಿರಿಯೂರು- ಬಳ್ಳಾರಿ ರಾಜ್ಯ ಹೆದ್ದಾರಿ ಹಾನಗಲ್ ವೃತ್ತದಿಂದ ತಮ್ಮೇನಹಳ್ಳಿ ಜಿಲ್ಲಾ ಗಡಿಯವರೆಗೆ | 1 | 0-1 | 55 | 38.06 | 59.9 | ಮೊಳಕಾಲ್ಮೂರು ವಲಯದಲ್ಲಿ ಎಂ.ಡಿ. ಮಹದೇವ ಸಸ್ಯಕ್ಷೇತ್ರದ ಆವರಣದಲ್ಲಿ ಮಧ್ಯಾಹ್ನ 3-00 ಗಂಟೆಯಿಂದ ಬಹಿರಂಗ ಹರಾಜು ನಡೆಸಲಾಗುವುದು. |
| | 2 | 1-2 | 48 | 29.56 | 47.5 | |
| | 3 | 2-3 | 54 | 15.52 | 57.7 | |
| | 4 | 3-4 | 31 | 7.79 | 41.75 | |
| | 5 | 4-5 | 17 | 7.87 | 18.00 | |
| | 6 | 5-6 | 26 | 24.29 | 25.20 | |
| | 7 | 6-7 | 18 | 29.50 | 15.50 | |
| | 8 | 7-8 | 22 | - | 22.45 | |
| | 9 | 8-9 | 18 | 17.46 | 14.60 | |
| | 10 | 9-10 | 31 | 12.23 | 41.00 | |
| | 11 | 10-11 | 19 | - | 26.40 | |
| | 12 | 11-13 | 17 | 0.46 | 16.15 | |
| | 13 | 13-14 | 39 | 45.02 | 44.70 | |
| | 14 | 14-15 | 67 | 24.84 | 59.75 | |
| | 15 | 15-16 | 50 | 0.81 | 36.95 | |
| | 16 | 16-17 | 37 | 3.72 | 21.70 | |
| | 17 | 17-18 | 2 | 1.69 | 0.60 | |
| | 18 | 18-19 | 28 | 30.46 | 18.30 | |
| | 19 | 19-20 | 27 | 65.66 | 32.70 | |
| | 20 | 20-21 | 21 | 4.19 | 10.35 | |
| | 21 | 21-22 | 21 | 11.36 | 25.10 | |
| | 22 | 22-23 | 62 | 37.67 | 39.55 | |
| | 23 | 23-24 | 47 | 43.91 | 36.04 | |
| | 24 | 24-25 | 52 | 25.69 | 50.95 | |
| | 25 | 25-26 | 68 | 34.27 | 48.90 | |

| 1 | 2 | 3 | 4 | 5 | 6 | 7 |
|---|---|---|---|---|---|---|
| | 26 | 26-27 | 21 | 15.78 | 24.90 | ಮೊಳಕಾಲ್ಮೂರು ವಲಯದಲ್ಲಿ ಎಂ.ಡಿ. ಮಹದೇವ ಸಸ್ಯಕ್ಷೇತ್ರದ ಆವರಣದಲ್ಲಿ ಮಧ್ಯಾಹ್ನ 3-00 ಗಂಟೆಯಿಂದ ಬಹಿರಂಗ ಹರಾಜು ನಡೆಸಲಾಗುವುದು. |
| | 27 | 27-28 | 33 | 30.11 | 60.90 | |
| | 28 | 28-29 | 70 | 77.71 | 63.15 | |
| | 29 | 29-30 | 8 | 4.40 | 8.20 | |
| | | **ಒಟ್ಟು** | **1009** | **640.03** | **968.89** | |

**ಷರತ್ತುಗಳು:**

1. ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ರೂ. 5000/- ಗಳ ಇ.ಎಂ.ಡಿ. ಮೊತ್ತವನ್ನು ಠೇವಣಿಯಾಗಿಡತಕ್ಕದ್ದು.
2. ಹರಾಜುದಾರರು ಬಹಿರಂಗ ಹರಾಜಿನ ಷರತ್ತುಗಳನ್ನು ಒಪ್ಪಿಕೊಂಡು ಸವಿಸ್ತಾರ ಬಹಿರಂಗ ಹರಾಜು ಪ್ರಕಟಣೆಯಲ್ಲಿ ಸಹಿ ಹಾಕದ ಹೊರತು ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ. ಸದರಿ ಹರಾಜಿನಲ್ಲಿ ಸಂಘ, ಸಂಸ್ಥೆಯವರು ಸಹ ಭಾಗವಹಿಸಬಹುದಾಗಿರುತ್ತದೆ.
3. ಯಶಸ್ವಿಯಾಗದ ಬಿಡ್‌ದಾರರು ಇಟ್ಟ ಠೇವಣಿ ಹಣವನ್ನು ಹರಾಜು ಮುಗಿದ ನಂತರ ಆ ದಿನವೇ ಹಿಂತಿರುಗಿಸಿ ಕೊಡಲಾಗುವುದು.
4. ಮರಗಳನ್ನು ಹರಾಜಿಗೆ ಇಟ್ಟಿರುವ ಪರಿಮಾಣವು ಹೆಚ್ಚು ಕಡಿಮೆ ವ್ಯತ್ಯಾಸವಾಗಬಹುದು ಅಂತಹುದಕ್ಕೆ ಯಾವುದೇ ರೀತಿಯ ದೂರುಗಳನ್ನು ಮಾನ್ಯ ಮಾಡುವುದಿಲ್ಲ.
5. ಯಶಸ್ವಿ ಬಿಡ್‌ದಾರರು ಬಿಡ್ ಮುಗಿದ ತಕ್ಷಣ ಖರೀದಿಸಿದ ಯುನಿಟ್‌ಗಳ ಮೊತ್ತದ ಶೇಕಡ 50 ರಷ್ಟು ಹಣ ಹಾಗೂ ಪೂರ್ಣ ತೆರಿಗೆಗಳನ್ನು ಅದೇ ದಿನ ಪಾವತಿಸಬೇಕು. ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜುದಾರರ ಜವಾಬ್ದಾರಿ ಮೇಲೆ ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಮೊದಲನೇ ಬಿಡ್‌ಗಿಂತ ಹಣ ಕಡಿಮೆ ಬಂದಲ್ಲಿ ಕಡಿಮೆಯಾದ ಹಣವನ್ನು ತಪ್ಪಿತಸ್ಥರಾದ ಮೊದಲನೇ ಯಶಸ್ವಿ ಬಿಡ್‌ದಾರರಿಂದ ಬಾಕಿ ಭೂ ಕಂದಾಯ ರೂಪದಲ್ಲಿ ಸೆಕ್ಷನ್-109ರ ಪ್ರಕಾರ ವಸೂಲಿ ಮಾಡಲಾಗುವುದು. ಒಂದು ವೇಳೆ ಮರು ಹರಾಜಿನಲ್ಲಿ ಹೆಚ್ಚಿಗೆ ಹಣ ಬಂದಲ್ಲಿ ಮೊದಲನೇ ಯಶಸ್ವಿ ಬಿಡ್‌ದಾರರಿಗೆ ಈ ಹೆಚ್ಚಿಗೆ ಬಂದ ಹಣವನ್ನು ಕೇಳುವ ಅಧಿಕಾರವಿರುವುದಿಲ್ಲ.
6. ಯಶಸ್ವಿ ಬಿಡ್‌ದಾರರು ಬಹಿರಂಗ ಹರಾಜಿನ ದಿನವೇ ಹರಾಜು ಬೆಲೆಯ ಮೊತ್ತದಲ್ಲಿ ಶೇಕಡ 50 ರಷ್ಟನ್ನು ಮತ್ತು ಪೂರ್ಣ ತೆರಿಗೆಗಳನ್ನು ಪಾವತಿ ಮಾಡಿದ ನಂತರ ಉಳಿದ ಶೇಕಡ 50 ರಷ್ಟು ಮೊತ್ತವನ್ನು ಕರಾರು ಒಪ್ಪಂದ ಮಾಡಿಕೊಂಡು ಕಾರ್ಯಾದೇಶವನ್ನು ಪಡೆಯುವ ಮೊದಲು ಪಾವತಿಸತಕ್ಕದ್ದು.
7. ವರಮಾನ ತೆರಿಗೆಯನ್ನು ತೆರಿಗೆ ಸೆಕ್ಷನ್-216ಸಿ ಪ್ರಕಾರ ವಿಧಿಸಲಾಗುವುದು.
8. ಬಹಿರಂಗ ಹರಾಜಿನಲ್ಲಿ ಖರೀದಿಸಿದ ಮರಗಳನ್ನು ಸ್ವಂತ ಖರ್ಚಿನಿಂದ ನಿಯಮಾನುಸಾರ ಕಟಾವು ಮಾಡಿಕೊಂಡು ಸಾಗಿಸಿಕೊಳ್ಳುವುದು.
9. ಇಲಾಖೆಯಿಂದ ಪಟ್ಟಿ ಮಾಡಲ್ಪಟ್ಟಿರುವ ಮರಗಳ ಎಣಿಕೆಗಳನ್ನು ಮತ್ತು ವಿಂಗಡಣೆಗಳನ್ನು ಅಖೈರವಾಗಿ ಒಪ್ಪಿಕೊಳ್ಳತಕ್ಕದ್ದು. ಮಾರಾಟ ಮಾಡುವ ಮುನ್ನ ಖರೀದಿಸಲು ಇಷ್ಟಪಡುವವರು ಮರ ಮುಟ್ಟುಗಳ ಅಳತೆ, ಗುಣ, ಪರಿಮಾಣಗಳನ್ನು ಪರಿಶೀಲಿಸಿಕೊಳ್ಳಬಹುದು. ಅನಂತರ ಬರುವ ದೂರುಗಳನ್ನು ಸ್ವೀಕರಿಸುವುದಿಲ್ಲ.
10. ಮರಗಳು ಎಲ್ಲಿ, ಯಾವ ಸ್ಥಿತಿಯಲ್ಲಿ ಇರುತ್ತವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
11. ಕಪ್ಪು ಪಟ್ಟಿಯಲ್ಲಿರುವವರು, ದಿವಾಳಿಯಾದವರು ಅಥವಾ ಬಾಕಿದಾರರು ಅಥವಾ ವಯಸ್ಕರಲ್ಲದವರು ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.
12. ಯಶಸ್ವಿ ಬಿಡ್‌ದಾರರು ಸ್ಥಿರೀಕರಣ ಆದೇಶ ಪಡೆದ ದಿನಾಂಕದಿಂದ ಒಂದು ತಿಂಗಳೊಳಗಾಗಿ ಇಲಾಖಾ ಅನುಮತಿಯನ್ನು ಪಡೆದುಕೊಂಡು ಮರಗಳನ್ನು ಅವರ ಸ್ವಂತ ಖರ್ಚಿನಲ್ಲಿ ಕಟಾವು ಮಾಡಿಕೊಂಡು ಹೋಗತಕ್ಕದ್ದು.
13. ಬಹಿರಂಗ ಹರಾಜಿನ ಸಂಬಂಧ ತಂಟೆ ತಕರಾರು ಏನಾದರೂ ಬಂದಲ್ಲಿ ಅದನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಸಂಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ಇವರಿಗೆ ಕಾಯ್ದಿರಿಸಲಾಗಿದೆ.
14. ಯಶಸ್ವಿ ಹರಾಜುದಾರರು ಖರೀದಿಸಲ್ಪಟ್ಟ ಮರಗಳನ್ನು ಕಟಾವು ಮಾಡಿ ಸಾಗಣೆ ಮಾಡಿಕೊಳ್ಳದೆ ಹಾಗೆಯೇ ಬಿಟ್ಟು ಅಕ್ರಮ ಕಡತಲೆ ಹಾಗೂ ಕಳ್ಳತನವಾದರೆ, ಬೆಂಕಿ ಮತ್ತು ಯಾವುದೇ ಪ್ರಕೃತಿಯಿಂದ ನಷ್ಟವಾದರೆ ಇಲಾಖೆ ಜವಾಬ್ದಾರಿಯಾಗಿರುವುದಿಲ್ಲ.
15. ಯಶಸ್ವಿ ಹರಾಜುದಾರರು ನಿಂತ ಮರಗಳನ್ನು ಕಟಾವಣೆ ಮಾಡುವಾಗ ಸಾರ್ವಜನಿಕ ಸೊತ್ತುಗಳಿಗೆ, ವಿದ್ಯುತ್ ಕಂಬಗಳಿಗೆ, ದೂರವಾಣಿ ಸಂಪರ್ಕಕ್ಕೆ, ವಾಹನ ಸಂಚಾರಕ್ಕೆ ಹಾಗೂ ಪ್ರಯಾಣಿಕರಿಗೆ ತೊಂದರೆಯಾಗದಂತೆ ನೋಡಿಕೊಳ್ಳತಕ್ಕದ್ದು. ಯಾವುದೇ ಅನಾಹುತಗಳು ಸಂಭವಿಸಿದಲ್ಲಿ ಯಶಸ್ವಿ ಹರಾಜುದಾರರೇ ಹೊಣೆಗಾರರಾಗಿರುತ್ತಾರೆ.
16. ಅನಿವಾರ್ಯ ಕಾರಣಗಳಿಂದ ತಡವಾಗಿ ಹರಾಜಿನಲ್ಲಿ ಭಾಗವಹಿಸಲು ಬಂದ ಬಿಡ್‌ದಾರರು ಹರಾಜು ನಡೆಸುವ ಅಧಿಕಾರಿಗಳ ಅನುಮತಿ ಪಡೆದು ಹರಾಜಿನಲ್ಲಿ ಇ.ಎಂ.ಡಿ ಹಣವನ್ನು ತುಂಬಿ ಭಾಗವಹಿಸಬಹುದು.

17. ಬಹಿರಂಗ ಹರಾಜಿನ ಸಮಯದಲ್ಲಿ ಅವಶ್ಯಕವಾಗಿ ಸೇರಿಸಬೇಕಾದಂತಹ ಯಾವುದೇ ಷರತ್ತುಗಳನ್ನು ಸೇರಿಸಬಹುದು ಮತ್ತು ಯಾವುದೇ ಅವಶ್ಯ ಬದಲಾವಣೆಗಳನ್ನು ಜಾರಿಗೆ ತರಲಾಗುವುದು. ಹರಾಜಿನ ಕಾಲದಲ್ಲಿ ಬದಲಾವಣೆಗಳನ್ನು ಓದಿ ಹೇಳಲಾಗುವುದು.

18. ಸರ್ಕಾರದ ಇತರೆ ಕಾನೂನು ಕಟ್ಟಳೆಗಳಿಗೆ ಬದ್ಧರಾಗಿರತಕ್ಕದ್ದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್.807

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು (ಪ್ರಾದೇಶಿಕ)ರವರ ಕಛೇರಿ, ಚಿತ್ರದುರ್ಗ

### ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ:ಎ6/ರಸ್ತೆ ಬದಿ. ಸಿಆರ್-38/2001-02, ದಿನಾಂಕ:4ನೇ ಡಿಸೆಂಬರ್, 2003**

**ವಿಷಯ:** ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ವಿಶ್ವ ಬ್ಯಾಂಕ್ ಸಹಕಾರಿ) ಹಂತ-2ರಲ್ಲಿ ರಸ್ತೆಗಳ ಅಗಲೀಕರಣಕ್ಕೆ ಸಂಬಂಧಿಸಿದಂತೆ ಮೊಳಕಾಲ್ಮೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಾರಿಡಾರ್ ಆಫ್ ಇಂಪ್ಯಾಕ್ಟ್‌ನ ಒಳಗಡೆ ಬರುವ ವಿವಿಧ ಜಾತಿಯ ಮರಗಳನ್ನು ವಿಲೇ ಮಾಡಿಕೊಡಲು ಬಹಿರಂಗ ಹರಾಜು ಪ್ರಕಟಣೆ ಹೊರಡಿಸುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಚಿತ್ರದುರ್ಗ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಬರುವ **ಹಿರಿಯೂರು-ಬಳ್ಳಾರಿ** ರಾಜ್ಯ ಹೆದ್ದಾರಿ ಅಗಲೀಕರಣಕ್ಕೆ ಸಂಬಂಧಿಸಿದಂತೆ ಮೊಳಕಾಲ್ಮೂರು ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಬಿ.ಜಿ. ಕೆರೆ ಗಡಿಯಿಂದ ಹಾನಗಲ್ ವೃತ್ತದವರೆಗೆ ಕಿ.ಮೀ. 30 ರಿಂದ 49.45ರವರೆಗಿನ ರಸ್ತೆಯ ಅಗಲೀಕರಣದೊಳಗೆ ಬರುವ ಕಾರಿಡಾರ್ ಆಫ್ ಇಂಪ್ಯಾಕ್ಟ್‌ನಲ್ಲಿ ಬೆಳೆದು ನಿಂತಿರುವ ವಿವಿಧ ಜಾತಿಯ ಮರಗಳನ್ನು ವಿಲೇವಾರಿ ಮಾಡಲು ದಿನಾಂಕ: 20.01.2004 ರಂದು ಮೊಳಕಾಲ್ಮೂರು ವಲಯದಲ್ಲಿ ಬಿ.ಜಿ. ಕೆರೆ ಸಸ್ಯಕ್ಷೇತ್ರದ ಆವರಣದಲ್ಲಿ ಬಹಿರಂಗ ಹರಾಜು ಮಾಡಲು ದಿನಾಂಕವನ್ನು ನಿಗದಿಪಡಿಸಲಾಗಿದೆ.

ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಾಗಲಿ ಅಥವಾ ಅವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟ ಅಧಿಕಾರಿಗಳಾಗಲಿ ಈ ಕೆಳಗೆ ನಮೂದಿಸಿರುವ ಷರತ್ತಿಗೊಳಪಟ್ಟು ಬಹಿರಂಗ ಹರಾಜು ನಡೆಸಲಾಗುವುದು. ಇಚ್ಛೆಯುಳ್ಳವರು ಈ ಹರಾಜಿನಲ್ಲಿ ಭಾಗವಹಿಸುವುದು. ಸದರಿ ಬಹಿರಂಗ ಹರಾಜನ್ನು ಅನುಸೂಚಿಯಲ್ಲಿ ನಮೂದಿಸಿರುವ ಸ್ಥಳದಲ್ಲಿ ಮೇಲ್ಕಂಡ ದಿನಾಂಕದಂದು ನಡೆಸಲಾಗುವುದು.

ದಿನಾಂಕ: 20.01.2004 ರಂದು ಮೊಳಕಾಲ್ಮೂರು ವಲಯದಲ್ಲಿ ಬಿ.ಜಿ. ಕೆರೆ ಸಸ್ಯಕ್ಷೇತ್ರದ ಆವರಣದಲ್ಲಿ ನಡೆಸುವ ಬಹಿರಂಗ ಹರಾಜಿನಲ್ಲಿ ಬಿಡ್‌ದಾರರು ಭಾಗವಹಿಸದೆ ಇದ್ದಲ್ಲಿ ಅಥವಾ ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಮರು ಹರಾಜನ್ನು ದಿನಾಂಕ:28.01.2004 ರಂದು ನಡೆಸಲಾಗುವುದು. ನಂತರದ ಎರಡನೆಯ ಮರು ಹರಾಜನ್ನು ದಿನಾಂಕ:04.02.2004 ರಂದು ನಡೆಸಲಾಗುವುದು. ಈ ಹರಾಜುಗಳಿಗಾಗಿ ಪುನಃ ಯಾವುದೇ ರೀತಿಯ ಪ್ರಕಟಣೆ ಹೊರಡಿಸಲಾಗುವುದಿಲ್ಲ.

**ಅನುಸೂಚಿ**

| ರಸ್ತೆಯ ಹೆಸರು | ಯುನಿಟ್ ಸಂಖ್ಯೆ | ಕಿ.ಮೀ | ಮರಗಳ ಸಂಖ್ಯೆ | ಅಂದಾಜು ಉತ್ಪನ್ನ ಪ್ರಮಾಣ | | ಬಹಿರಂಗ ಹರಾಜು ಮಾಡುವ ಸ್ಥಳ/ ವೇಳೆ |
|---|---|---|---|---|---|---|
| | | | | ಟಿಂಬರ್ (ಕ್ಯೂ.ಮೀ) | ಉರುವಲು (ಟನ್) | |
| 1 | 2 | 3 | 4 | 5 | 6 | 7 |
| ಹಿರಿಯೂರು- ಬಳ್ಳಾರಿ ರಾಜ್ಯ ಹೆದ್ದಾರಿ ಬಿ.ಜಿ. ಕೆರೆ ಯಿಂದ ಹಾನಗಲ್ ವೃತ್ತದವರೆಗೆ | 1 | 30-31 | 15 | 0.506 | 21.00 | ಮೊಳಕಾಲ್ಮೂರು ವಲಯದ ಬಿ.ಜಿ. ಕೆರೆ ಸಸ್ಯಕ್ಷೇತ್ರದ ಆವರಣದಲ್ಲಿ ಮಧ್ಯಾಹ್ನ 3-00 ಗಂಟೆಯಿಂದ ಬಹಿರಂಗ ಹರಾಜು ನಡೆಸಲಾಗುವುದು. |
| | 2 | 31-32 | 49 | - | 73.60 | |
| | 3 | 32-33 | 88 | 7.77 | 101.00 | |
| | 4 | 33-34 | 57 | - | 76.20 | |
| | 5 | 34-35 | 24 | - | 28.60 | |
| | 6 | 35-36 | 14 | - | 13.35 | |
| | 7 | 36-37 | 27 | 0.67 | 20.55 | |
| | 8 | 37-38 | 13 | 1.37 | 3.35 | |
| | 9 | 38-39 | 21 | - | 7.30 | |
| | 10 | 39-40 | 28 | - | 8.50 | |
| | 11 | 40-41 | 27 | - | 7.10 | |

| 1 | 2 | 3 | 4 | 5 | 6 | 7 |
|---|---|---|---|---|---|---|
| | 12 | 41-42 | 45 | 0.76 | 28.90 | ಮೊಳಕಾಲ್ಮೂರು ವಲಯದ ಬಿ.ಜಿ. ಕೆರೆ ಸಸ್ಯಕ್ಷೇತ್ರದ ಆವರಣದಲ್ಲಿ ಮಧ್ಯಾಹ್ನ 3-00 ಗಂಟೆಯಿಂದ ಬಹಿರಂಗ ಹರಾಜು ನಡೆಸಲಾಗುವುದು. |
| | 13 | 42-43 | 15 | - | 13.50 | |
| | 14 | 43-44 | 14 | - | 14.80 | |
| | 15 | 44-45 | 22 | 12.53 | 16.65 | |
| | 16 | 45-46 | 35 | 32.62 | 36.70 | |
| | 17 | 46-47 | 38 | 12.15 | 49.10 | |
| | 18 | 47-48 | 14 | 7.68 | 17.30 | |
| | 19 | 48-49 | 52 | 3.57 | 55.50 | |
| | 20 | 49-49.45 | 29 | 0.36 | 33.20 | |
| | | **ಒಟ್ಟು** | **627** | **79.986** | **626.20** | |

**ಷರತ್ತುಗಳು:**

1. ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ರೂ. 5000/- ಗಳ ಇ.ಎಂ.ಡಿ. ಮೊತ್ತವನ್ನು ಠೇವಣಿಯಾಗಿಡತಕ್ಕದ್ದು.
2. ಹರಾಜುದಾರರು ಬಹಿರಂಗ ಹರಾಜಿನ ಷರತ್ತುಗಳನ್ನು ಒಪ್ಪಿಕೊಂಡು ಸವಿಸ್ತಾರ ಬಹಿರಂಗ ಹರಾಜು ಪ್ರಕಟಣೆಯಲ್ಲಿ ಸಹಿ ಹಾಕದ ಹೊರತು ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ. ಸದರಿ ಹರಾಜಿನಲ್ಲಿ ಸಂಘ, ಸಂಸ್ಥೆಯವರು ಸಹ ಭಾಗವಹಿಸಬಹುದಾಗಿರುತ್ತದೆ.
3. ಯಶಸ್ವಿಯಾಗದ ಬಿಡ್‌ದಾರರು ಇಟ್ಟ ಠೇವಣಿ ಹಣವನ್ನು ಹರಾಜು ಮುಗಿದ ನಂತರ ಆ ದಿನವೇ ಹಿಂತಿರುಗಿಸಿ ಕೊಡಲಾಗುವುದು.
4. ಮರಗಳನ್ನು ಹರಾಜಿಗೆ ಇಟ್ಟಿರುವ ಪರಿಮಾಣವು ಹೆಚ್ಚು ಕಡಿಮೆ ವ್ಯತ್ಯಾಸವಾಗಬಹುದು ಅಂತಹುದಕ್ಕೆ ಯಾವುದೇ ರೀತಿಯ ದೂರುಗಳನ್ನು ಮಾನ್ಯ ಮಾಡುವುದಿಲ್ಲ.
5. ಯಶಸ್ವಿ ಬಿಡ್‌ದಾರರು ಬಿಡ್ ಮುಗಿದ ತಕ್ಷಣ ಖರೀದಿಸಿದ ಯುನಿಟ್‌ಗಳ ಮೊತ್ತದ ಶೇಕಡ 50 ರಷ್ಟು ಹಣ ಹಾಗೂ ಪೂರ್ಣ ತೆರಿಗೆಗಳನ್ನು ಅದೇ ದಿನ ಪಾವತಿಸಬೇಕು. ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜುದಾರರ ಜವಾಬ್ದಾರಿ ಮೇಲೆ ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಮೊದಲನೇ ಬಿಡ್‌ಗಿಂತ ಹಣ ಕಡಿಮೆ ಬಂದಲ್ಲಿ ಕಡಿಮೆಯಾದ ಹಣವನ್ನು ತಪ್ಪಿತಸ್ಥರಾದ ಮೊದಲನೇ ಯಶಸ್ವಿ ಬಿಡ್‌ದಾರರಿಂದ ಬಾಕಿ ಭೂ ಕಂದಾಯ ರೂಪದಲ್ಲಿ ಸೆಕ್ಷನ್-109ರ ಪ್ರಕಾರ ವಸೂಲಿ ಮಾಡಲಾಗುವುದು. ಒಂದು ವೇಳೆ ಮರು ಹರಾಜಿನಲ್ಲಿ ಹೆಚ್ಚಿಗೆ ಹಣ ಬಂದಲ್ಲಿ ಮೊದಲನೇ ಯಶಸ್ವಿ ಬಿಡ್‌ದಾರರಿಗೆ ಈ ಹೆಚ್ಚಿಗೆ ಬಂದ ಹಣವನ್ನು ಕೇಳುವ ಅಧಿಕಾರವಿರುವುದಿಲ್ಲ.
6. ಯಶಸ್ವಿ ಬಿಡ್‌ದಾರರು ಬಹಿರಂಗ ಹರಾಜಿನ ದಿನವೇ ಹರಾಜು ಬೆಲೆಯ ಮೊತ್ತದಲ್ಲಿ ಶೇಕಡ 50 ರಷ್ಟನ್ನು ಮತ್ತು ಪೂರ್ಣ ತೆರಿಗೆಗಳನ್ನು ಪಾವತಿ ಮಾಡಿದ ನಂತರ ಉಳಿದ ಶೇಕಡ 50 ರಷ್ಟು ಮೊತ್ತವನ್ನು ಕರಾರು ಒಪ್ಪಂದ ಮಾಡಿಕೊಂಡು ಕಾರ್ಯಾದೇಶವನ್ನು ಪಡೆಯುವ ಮೊದಲು ಪಾವತಿಸತಕ್ಕದ್ದು.
7. ವರಮಾನ ತೆರಿಗೆಯನ್ನು ತೆರಿಗೆ ಸೆಕ್ಷನ್-216ಸಿ ಪ್ರಕಾರ ವಿಧಿಸಲಾಗುವುದು.
8. ಬಹಿರಂಗ ಹರಾಜಿನಲ್ಲಿ ಖರೀದಿಸಿದ ಮರಗಳನ್ನು ಸ್ವಂತ ಖರ್ಚಿನಿಂದ ನಿಯಮಾನುಸಾರ ಕಟಾವು ಮಾಡಿಕೊಂಡು ಸಾಗಿಸಿಕೊಳ್ಳುವುದು.
9. ಇಲಾಖೆಯಿಂದ ಪಟ್ಟಿ ಮಾಡಲ್ಪಟ್ಟಿರುವ ಮರಗಳ ಎಣಿಕೆಗಳನ್ನು ಮತ್ತು ವಿಂಗಡಣೆಗಳನ್ನು ಅಖೈರವಾಗಿ ಒಪ್ಪಿಕೊಳ್ಳತಕ್ಕದ್ದು. ಮಾರಾಟ ಮಾಡುವ ಮುನ್ನ ಖರೀದಿಸಲು ಇಷ್ಟಪಡುವವರು ಮರ ಮುಟ್ಟುಗಳ ಅಳತೆ, ಗುಣ, ಪರಿಮಾಣಗಳನ್ನು ಪರಿಶೀಲಿಸಿಕೊಳ್ಳಬಹುದು. ಅನಂತರ ಬರುವ ದೂರುಗಳನ್ನು ಸ್ವೀಕರಿಸುವುದಿಲ್ಲ.
10. ಮರಗಳು ಎಲ್ಲಿ, ಯಾವ ಸ್ಥಿತಿಯಲ್ಲಿ ಇರುತ್ತವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
11. ಕಪ್ಪು ಪಟ್ಟಿಯಲ್ಲಿರುವವರು, ದಿವಾಳಿಯಾದವರು ಅಥವಾ ಬಾಕಿದಾರರು ಅಥವಾ ವಯಸ್ಕರಲ್ಲದವರು ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.
12. ಯಶಸ್ವಿ ಬಿಡ್‌ದಾರರು ಸ್ಥಿರೀಕರಣ ಆದೇಶ ಪಡೆದ ದಿನಾಂಕದಿಂದ ಒಂದು ತಿಂಗಳೊಳಗಾಗಿ ಇಲಾಖಾ ಅನುಮತಿಯನ್ನು ಪಡೆದುಕೊಂಡು ಮರಗಳನ್ನು ಅವರ ಸ್ವಂತ ಖರ್ಚಿನಲ್ಲಿ ಕಟಾವು ಮಾಡಿಕೊಂಡು ಹೋಗತಕ್ಕದ್ದು.
13. ಬಹಿರಂಗ ಹರಾಜಿನ ಸಂಬಂಧ ತಂಟೆ ತಕರಾರು ಏನಾದರೂ ಬಂದಲ್ಲಿ ಅದನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಸಂಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ಇವರಿಗೆ ಕಾಯ್ದಿರಿಸಲಾಗಿದೆ.
14. ಯಶಸ್ವಿ ಹರಾಜುದಾರರು ಖರೀದಿಸಲ್ಪಟ್ಟ ಮರಗಳನ್ನು ಕಟಾವು ಮಾಡಿ ಸಾಗಣೆ ಮಾಡಿಕೊಳ್ಳದೆ ಹಾಗೆಯೇ ಬಿಟ್ಟು ಅಕ್ರಮ ಕಡತಲೆ ಹಾಗೂ ಕಳ್ಳತನವಾದರೆ, ಬೆಂಕಿ ಮತ್ತು ಯಾವುದೇ ಪ್ರಕೃತಿಯಿಂದ ನಷ್ಟವಾದರೆ ಇಲಾಖೆ ಜವಾಬ್ದಾರಿಯಾಗಿರುವುದಿಲ್ಲ.

15. ಯಶಸ್ವಿ ಹರಾಜುದಾರರು ನಿಂತ ಮರಗಳನ್ನು ಕಟಾವಣೆ ಮಾಡುವಾಗ ಸಾರ್ವಜನಿಕ ಸೊತ್ತುಗಳಿಗೆ, ವಿದ್ಯುತ್ ಕಂಬಗಳಿಗೆ, ದೂರವಾಣಿ ಸಂಪರ್ಕಕ್ಕೆ, ವಾಹನ ಸಂಚಾರಕ್ಕೆ ಹಾಗೂ ಪ್ರಯಾಣಿಕರಿಗೆ ತೊಂದರೆಯಾಗದಂತೆ ನೋಡಿಕೊಳ್ಳತಕ್ಕದ್ದು. ಯಾವುದೇ ಅನಾಹುತಗಳು ಸಂಭವಿಸಿದಲ್ಲಿ ಯಶಸ್ವಿ ಹರಾಜುದಾರರೇ ಹೊಣೆಗಾರರಾಗಿರುತ್ತಾರೆ.

16. ಅನಿವಾರ್ಯ ಕಾರಣಗಳಿಂದ ತಡವಾಗಿ ಹರಾಜಿನಲ್ಲಿ ಭಾಗವಹಿಸಲು ಬಂದ ಬಿಡ್‌ದಾರರು ಹರಾಜು ನಡೆಸುವ ಅಧಿಕಾರಿಗಳ ಅನುಮತಿ ಪಡೆದು ಹರಾಜಿನಲ್ಲಿ ಇ.ಎಂ.ಡಿ ಹಣವನ್ನು ತುಂಬಿ ಭಾಗವಹಿಸಬಹುದು.

17. ಬಹಿರಂಗ ಹರಾಜಿನ ಸಮಯದಲ್ಲಿ ಅವಶ್ಯಕವಾಗಿ ಸೇರಿಸಬೇಕಾದಂತಹ ಯಾವುದೇ ಷರತ್ತುಗಳನ್ನು ಸೇರಿಸಬಹುದು ಮತ್ತು ಯಾವುದೇ ಅವಶ್ಯ ಬದಲಾವಣೆಗಳನ್ನು ಜಾರಿಗೆ ತರಲಾಗುವುದು. ಹರಾಜಿನ ಕಾಲದಲ್ಲಿ ಬದಲಾವಣೆಗಳನ್ನು ಓದಿ ಹೇಳಲಾಗುವುದು.

18. ಸರ್ಕಾರದ ಇತರೆ ಕಾನೂನು ಕಟ್ಟಳೆಗಳಿಗೆ ಬದ್ಧರಾಗಿರತಕ್ಕದ್ದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್.808

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, 7ನೇ ಮಹಡಿ, ಜಲಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ:ಸಿಬ್ಬಂದಿ-1-270/01-02, ದಿನಾಂಕ:10ನೇ ಡಿಸೆಂಬರ್, 2003**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಮೂರು ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಪ್ರಥಮ ದರ್ಜೆ ಸಹಾಯಕರನ್ನು ನೇರ ನೇಮಕಾತಿ ಮೂಲಕ ನೇಮಕ ಮಾಡಿಕೊಳ್ಳುವ ಕುರಿತು.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸೆನನಿ 2001 ದಿನಾಂಕ: 13.02.2001.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕ: 08.02.2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 01.06.2002.
5. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕ: 30.01.2002.
6. ಈ ಕಛೇರಿಯ ಸಮಸಂಖ್ಯೆ: ತಾತ್ಕಾಲಿಕ ಆಯ್ಕೆಪಟ್ಟಿ ದಿನಾಂಕ: 24.03.2003.
7. ಈ ಕಛೇರಿಯ ಸಮಸಂಖ್ಯೆ: ಅಂತಿಮ ಆಯ್ಕೆಪಟ್ಟಿ ದಿನಾಂಕ: 24.11.2003.

**ಪ್ರಸ್ತಾವನೆ:**

ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡ ಮೀಸಲಾತಿ ವರ್ಗೀಕರಣದಂತೆ ಗುರುತಿಸಲ್ಪಟ್ಟ ಮೂರು ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (1) (2) ಮತ್ತು (4) ರನ್ವಯ ಪ್ರಕಟಿಸಿರುವ ನಿಯಮಗಳ ಪ್ರಕಾರ ಈ ಕಛೇರಿಯ ಉಲ್ಲೇಖ (5)ರ ಅಧಿಸೂಚನೆಯಲ್ಲಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು.

| ಕ್ರ. ಸಂ. | ಮೀಸಲಾತಿ ವರ್ಗೀಕರಣ | ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ |
|---|---|---|
| 1. | ಸಾಮಾನ್ಯ ಅರ್ಹತೆ ಅಭ್ಯರ್ಥಿ | 1 |
| 2. | ಮಹಿಳಾ ಅಭ್ಯರ್ಥಿ | 1 |
| 3. | ಗ್ರಾಮೀಣ ಅಭ್ಯರ್ಥಿ | 1 |
| | **ಒಟ್ಟು** | **3** |

ಈ ಬಗ್ಗೆ ಸ್ವೀಕೃತವಾದ ಅರ್ಜಿಗಳನ್ನು ಪರಿಶೀಲಿಸಿ ಉಲ್ಲೇಖ (1)ರಲ್ಲಿನ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳಲ್ಲಿ ಹೆಚ್ಚು ಅಂಕ ಗಳಿಸಿದ ಮೂರು ಅಭ್ಯರ್ಥಿಗಳನ್ನು ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ಪ್ರಥಮ ದರ್ಜೆ ಸಹಾಯಕರೆಂದು ತಾತ್ಕಾಲಿಕವಾಗಿ ಆಯ್ಕೆ ಮಾಡಿ ಆಯ್ಕೆಯಾದ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಈ ಕಛೇರಿಯ ಉಲ್ಲೇಖ (6)ರನ್ವಯ ದಿನಾಂಕ: 24.03.2003 ರಂದು ಪ್ರಕಟಿಸಿ ತದನಂತರ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ಅಂತಿಮಗೊಳಿಸಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಈ ಕಛೇರಿಯ ಉಲ್ಲೇಖ (7)ರನ್ವಯ ದಿನಾಂಕ: 24.11.2003 ರಂದು ಪ್ರಕಟಿಸಲಾಯಿತು.

ಈ ರೀತಿ ಉಲ್ಲೇಖ (7)ರನ್ವಯ ದಿನಾಂಕ: 24.11.2003 ರಂದು ಪ್ರಕಟಿಸಿರುವ ಅಂತಿಮ ಆಯ್ಕೆಪಟ್ಟಿಯ ಮುಖ್ಯ ಪಟ್ಟಿಯಲ್ಲಿರುವ ಮೂರು ಅಭ್ಯರ್ಥಿಗಳನ್ನು ಅರ್ಹತೆ ಮತ್ತು ಮೀಸಲಾತಿಗೆ ಅನುಗುಣವಾಗಿ ಪ್ರಥಮ ದರ್ಜೆ ಸಹಾಯಕರೆಂದು ಮೂರು ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ 1-270: 2001-02, ದಿನಾಂಕ: 5ನೇ ಡಿಸೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (1)ರಲ್ಲಿನ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (7)ರನ್ವಯ ಪ್ರಕಟಿಸಿದ ಅಂತಿಮ ಆಯ್ಕೆ ಪಟ್ಟಿಯ ಮುಖ್ಯಪಟ್ಟಿಯಲ್ಲಿರುವ ಕೆಳಕಂಡ ಅಭ್ಯರ್ಥಿಗಳನ್ನು ಮೇಲ್ಕಂಡಂತೆ ವರ್ಗೀಕರಿಸಲ್ಪಟ್ಟ ಪ್ರಥಮ ದರ್ಜೆ ಸಹಾಯಕರ ಮೂರು ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಅರ್ಹತೆ ಆಧಾರದ ಮೇಲೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3850-100-4450-125-5700-150-7050ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 16.03.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಿಕೊಳ್ಳಲಾಗಿದೆ ಯೋ ಅದರ ವಿವರ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಶ್ರೀ ಶಿವಪುತ್ರ ತಂಗಾ S/o ತಿಪ್ಪಣ್ಣ ಮು:ಕಲ್ಲೂರ ತಾ: ಹುಮನಾಬಾದ ಜಿ: ಬೀದರ್-585 330 | 26.01.1971 | 31.01.13 | B.Sc. (Agri) 80.200 | ಕೇಂದ್ರ ಕಛೇರಿ ಕಾವೇರಿ ಭವನ 7ನೇ ಮಹಡಿ ಜಲಮಂಡಳಿ ಕಟ್ಟಡ ಬೆಂಗಳೂರು. | ಪರಿಶಿಷ್ಟ ಜಾತಿ ಸಾಮಾನ್ಯ ಅರ್ಹತೆ ಅಭ್ಯರ್ಥಿ |
| 2. | ಶಂಕರಪ್ಪ ಡೊಳ್ಳಿನ S/o ರಾವತಪ್ಪ ಮು:ಪೋಸ್ಟ್: ಮಣೂರ ತಾ: ಸಿಂಧಗಿ ಜಿ: ಬಿಜಾಪುರ | 20.06.1969 | 32.08.26 | B.Sc. (Agri) 79.100 | ಕೇಂದ್ರ ಕಛೇರಿ ಕಾವೇರಿ ಭವನ 7ನೇ ಮಹಡಿ ಜಲಮಂಡಳಿ ಕಟ್ಟಡ ಬೆಂಗಳೂರು. | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ |
| 3. | ಹೆಚ್.ಟಿ. ಲಲಿತಾ W/o R. ವಾಸುದೇವ ಹುಳಿಯಾರು ರಸ್ತೆ ಪೋಸ್ಟ್ ಆಫೀಸ್, ಹಿರಿಯೂರು-572143. | 20.07.1970 | 31.07.26 | B.H. Sc. 70.000 | ಕೇಂದ್ರ ಕಛೇರಿ ಕಾವೇರಿ ಭವನ 7ನೇ ಮಹಡಿ ಜಲಮಂಡಳಿ ಕಟ್ಟಡ ಬೆಂಗಳೂರು. | ಪರಿಶಿಷ್ಟ ಜಾತಿ ಮಹಿಳಾ ಅಭ್ಯರ್ಥಿ |

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.

3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್ ಮತ್ತು ಕೆ.ಸಿ.ಎಸ್ (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿ ಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ನೇಮಕಾತಿ ಪ್ರಾಧಿಕಾರಿ ಮುಂದೆ ಹಾಜರು ಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ನೇಮಕಾತಿ ಪ್ರಾಧಿಕಾರಿ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ನೇಮಕಾತಿ ಪ್ರಾಧಿಕಾರಿ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆ: ಕಾಲೇಜಿನ ಮುಖ್ಯಸ್ಥರು ನೀಡಿರುವ ನಡತೆ ಪ್ರಮಾಣ ಪತ್ರಗಳನ್ನು ನೇಮಕಾತಿ ಪ್ರಾಧಿಕಾರಿ ಮುಂದೆ ಹಾಜರು ಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966ರಲ್ಲಿನ ನಿಯಮ 28ರ ರೀತ್ಯ ನೇಮಕಾತಿ ಪ್ರಾಧಿಕಾರಿ ಮುಂದೆ ಘೋಷಣೆ ಹಾಜರು ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಶ್ರೀಮತಿ ಹೆಚ್.ಟಿ. ಲಲಿತಾ, ಹಿರಿಯೂರು ವಾಸಿ ಇವರು ಗೌರವಾನ್ವಿತ ಭಾರತದ ಸರ್ವೋಚ್ಛ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್. ನಾರಾಯಣ-Vs- ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಟ್ಟಿರುತ್ತದೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
17. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ
ನೋಂದಣಿ ಮಹಾಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

ಪಿ.ಆರ್.809

**IN THE COURT OF THE CIVIL JUDGE (SENIOR DIVISION) AT DODDABALLAPURA**
**P & S.C. No. 4/2002**

Between:

1. Sri K. Ramesh Babu,
S/o. Late V. Krishnappa,
aged 25 years,
Residing at M.U.S.S. Station Colony,
T.B. Circle, Doddaballapura Town,
Doddaballapura.
2. Smt. K. Usha Rani,
D/o. Late V. Krishnappa,
aged 28 years,
Residing at M.U.S.S. Station Colony,
T.B. Circle, Doddaballapura Town,
Doddaballapura. Petitioners.

V/s Respondents

Nil

**DRAFT PAPER PUBLICATION**

Whereas the Petitioners No. 1 and 2 filed petition before this Hon'ble Court for the relief of succession Certificate under Sec. 372 of Inida Succession Act in respect of the L.I.C. Policy of Late V. Krishnappa Policy Nos. 38982096 Rs. 3,000/- No. 73946981 Rs. 10,000/-, No.361037997 Rs. 50,000/-, No.361038023 Rs. 20,000/-, No.610293009 Rs.20,000/-, No.610464037 Rs.25,000/-, No.610464833 Rs.25,000/-, No.610465260 Rs.10,000/-, No.610587508 Rs.25,000/-, No. 610587676 Rs.25,000/-and Late B. Gangamma Policy Nos. 73946839 Rs.10,000/-, No.361037996 Rs.50,000/-, No.361038115 Rs.20,000/-, No.610464569 Rs.25,000/-, No.610977232 Rs.60,000/-, No.610978591 Rs.12,000/-, No.610979259 Rs.50,000/-, No.610979600 Rs.15,000/- who had taken the L.I.C. Policy at the L.I.C. of India a Branch Office at Chikkaballapura respectively during their life time and died due to fire accident on 6-9-1997. The total amount of all these Policies are Rs.4,55,000/- (Rupees: FOUR LAKHS FIFTY FIVE THOUSAND ONLY). Anybody having any claim/right or whatsoever in the claim/ Insurance Policy of Late V. Krishnappa and his wife B. Gangamma may file their claim or whatsoever before this Hon'ble Court. The next date of hearing is on 17th January, 2004.

Civi Judge (Sr.Dv.)
PD-92 Doddaballapur.

**IN THE COURT OF THE PRINCIPAL FAMILY JUDGE AT BANGALORE,**
**H.g.on 16th January, 2004, G & WC.No. 159/2003**

Between:

1. Smt. Rangamma,
W/o Late Hanumantharayappa,
Aged about 44 years,
Residing at Thanisandra Village,
Arabic College Post,
Bangalore-560 045. Petitioner

AND

Nil Respondent

Whereas the petitioner above named has filed the above petition under Sec.7 of the Guardian and Ward Act of 1890 for grant of guardianship certificate in favour of petitioner to represent the minor child by name Kum. Archana. R. daughter of deceased Sri V. Rangappa & Smt. Shanthamma.

And whereas the above case has been posted for hearing on 16.01.2004 interested persons may appear before this Hon'ble court on that day above mentioned date may file objections.

Given under my hand and seal of this court on this the 15th day of December, 2003.

BY ORDER OF THE COURT,
**SHERISTEDAR,**
FAMILY COURT,
PD-93 BANGALORE.

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ, ಸರ್ಕಾರಿ ಮುದ್ರಣಾಲಯ, ನಂ.6/೩, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ. ಪೀಣ್ಯ, ತುಮಕೂರು ರಸ್ತೆ, ಬೆಂಗಳೂರು**

**ಮುದ್ರಣ ಕಾಗದ ಸರಬರಾಜಿಗಾಗಿ ಟೆಂಡರ್ ಪ್ರಕಟಣೆ**

**ಪತ್ರ ಸಂಖ್ಯೆ: ಪಿ(ಪಿ) 352/ 2003-04, ದಿನಾಂಕ: 10ನೇ ಡಿಸೆಂಬರ್, 2003**

ಸರ್ಕಾರಿ ಮುದ್ರಣಾಲಯಗಳಿಗೆ ಈ ಟೆಂಡರ್ ಅಧಿಸೂಚನೆಯಲ್ಲಿ ತಿಳಿಸಿರುವ ಹಾಗೂ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವ ವಿವಿಧ ಅಳತೆ ಮತ್ತು ತಪಶೀಲುಗಳ ಪ್ರಕಾರ ಮುದ್ರಣ ಕೆಲಸಕ್ಕಾಗಿ/ ಲೇಖನ ಸಾಮಗ್ರಿ ಬಳಕೆಗಾಗಿ ಉಪಯೋಗಿಸುವ ವಿವಿಧ ಕಾಗದಗಳನ್ನು ಸರಬರಾಜು ಮಾಡಲು ಇಚ್ಛೆಯುಳ್ಳ ನೊಂದಾಯಿತ **ಕಾಗದ ತಯಾರಿಕಾ ಮಿಲ್ಲುಗಳಿಂದ ಮಾತ್ರ** ಈ ಕೆಳಕಂಡ ತಪಶೀಲು ಮತ್ತು ಅಳತೆಯ ಕಾಗದಗಳಿಗೆ ಮೊಹರಾದ ದರ ಪಟ್ಟಿಯನ್ನು ಕರೆಯಲಾಗಿದೆ. ಈ ದರಪಟ್ಟಿಯನ್ನು ದಿನಾಂಕ:12.01.2004ರ ಸಂಜೆ 4.30 ರವರೆಗೆ ಸ್ವೀಕರಿಸಲಾಗುವುದು. ಟೆಂಡರ್‌ದಾರರು ಈ ಕೆಳಕಂಡ ಷರತ್ತು ಮತ್ತು ಅರ್ಹತೆಗಳ ಆಧಾರದ ಮೇಲೆ ಲಕೋಟೆ I ಮತ್ತು ಲಕೋಟೆ II ರಲ್ಲಿ ಪ್ರತ್ಯೇಕವಾಗಿ ಸಲ್ಲಿಸಬೇಕಾಗುತ್ತದೆ. ಇದಕ್ಕೆ ಸಂಬಂಧಿಸಿದ ಷರತ್ತುಗಳು ಮತ್ತು ನಿಬಂಧನೆಗಳು ಈ ಕೆಳಗಿನಂತೆ ಇರುತ್ತವೆ.

**ಷರತ್ತುಗಳು ಮತ್ತು ನಿಬಂಧನೆಗಳು**

**ಲಕೋಟೆ I ರ ಷರತ್ತುಗಳು**

1. ಟೆಂಡರ್‌ದಾರರು ಕರ್ನಾಟಕ ಮಾರಾಟ ತೆರಿಗೆ (ಕೆ.ಎಸ್.ಟಿ) ಹಾಗೂ (ಸಿ.ಎಸ್.ಟಿ) ನೊಂದಾಯಿತ ದೃಢೀಕರಣ ಪ್ರತಿಗಳು ಹಾಗೂ ಕರ್ನಾಟಕ ಮಾರಾಟ ತೆರಿಗೆ ಇಲಾಖೆ ನಮೂನೆ ಸಂಖ್ಯೆ 3ರಲ್ಲಿ ನವೆಂಬರ್ 2003ರ ನವೀಕರಣ ಪ್ರತಿ (ಮಾಸಿಕ ತೆರಿಗೆ ಸಂದಾಯ ಪ್ರತಿ)ಗಳನ್ನು ವಾರ್ಷಿಕ ವರದಿಯೊಂದಿಗೆ ತೆರಿಗೆ ಅಧಿಕಾರಿಗಳಿಂದ ದೃಢೀಕರಣ ಪ್ರಮಾಣ ಪತ್ರವನ್ನು ಪಡೆದು ಲಗತ್ತಿಸಿರಬೇಕು.
2. ಟೆಂಡರ್‌ದಾರರು ಈ ಹಿಂದಿನ ಕನಿಷ್ಠ ಮೂರು ವರ್ಷಗಳು ಅಂದರೆ 2000-2001, 2001-2002, ಮತ್ತು 2002-2003ರ ಅವಧಿಯಲ್ಲಿ ಆದಾಯ ತೆರಿಗೆಯನ್ನು ಪಾವತಿ ಮಾಡಿರುವ ಬಗ್ಗೆ ಮತ್ತು 2002-2003ನೇ ಸಾಲಿನ ಆದಾಯ ತೆರಿಗೆ ಅಸೆಸ್‌ಮೆಂಟ್‌ನೊಂದಿಗೆ ಆದಾಯ ತೆರಿಗೆ ಅಧಿಕಾರಿಗಳಿಂದ ಪಡೆದ ಸ್ವೀಕೃತಿ ಪ್ರತಿಯನ್ನು ಲಗತ್ತಿಸಿರಬೇಕು.
3. ಟೆಂಡರ್‌ದಾರರು ಕಳೆದ ಮೂರು ವರ್ಷಗಳಲ್ಲಿ ಸಂಸ್ಥೆಯ ಲಾಭ ಮತ್ತು ನಷ್ಟಗಳ ಬಗ್ಗೆ ಲೆಕ್ಕಪರಿಶೋಧಕರಿಂದ ಪಡೆದ ದೃಢೀಕರಣ ಪತ್ರ ಹಾಗೂ ಪ್ರತಿ ವರ್ಷ ಕನಿಷ್ಠ 5 ಕೋಟಿ ರೂಪಾಯಿಗಳಷ್ಟು ವಾರ್ಷಿಕ ವಹಿವಾಟು ಮಾಡಿರುವುದರ ಬಗ್ಗೆ ಚಾರ್ಟೆಡ್ ಅಕೌಂಟೆಂಟರವರಿಂದ ದೃಢೀಕರಣ ಮಾಡಿಸಿದ ಪತ್ರವನ್ನು ಲಗತ್ತಿಸಿರಬೇಕು.
4. ಟೆಂಡರ್‌ದಾರರು ಸರ್ಕಾರದ ಇಲಾಖೆಗಳಿಗೆ ಹಿಂದಿನ ಮೂರು ವರ್ಷಗಳಲ್ಲಿ ಬೃಹತ್ ಪ್ರಮಾಣದಲ್ಲಿ ಕಾಗದಗಳನ್ನು (ಅಂದರೆ, ವಾರ್ಷಿಕ ಕನಿಷ್ಠ ರೂ. 1 ಕೋಟಿ ವಹಿವಾಟಿನಷ್ಟು) ಸಮರ್ಪಕವಾಗಿ ಸರಬರಾಜು ಮಾಡಿದ ಅನುಭವ ಹೊಂದಿರಬೇಕು. ಈ ಬಗ್ಗೆ ಸಂಬಂಧಿಸಿದ ಇಲಾಖೆಗಳಿಂದ ದೃಢೀಕರಣ ಪತ್ರಗಳನ್ನು ಸಲ್ಲಿಸಬೇಕು.

**ಲಕೋಟೆ II ರ ಷರತ್ತುಗಳು**

1. ಟೆಂಡರ್‌ದಾರರು ಸರಬರಾಜು ಮಾಡಬಹುದಾದ ಪ್ರತಿ ಕಾಗದಕ್ಕೂ ಪ್ರತ್ಯೇಕವಾಗಿ ದರಗಳನ್ನು ನೀಡುವುದು. ಮೊಹರು ಮಾಡಿದ ಲಕೋಟೆ I ರ ಮೇಲೆ **"ಸರ್ಕಾರಿ ಮುದ್ರಣಾಲಯಗಳಿಗೆ ಕಾಗದಗಳ ಸರಬರಾಜು ಸಂಬಂಧವಾಗಿ ದಾಖಲೆಗಳು"** ಎಂದು ಹಾಗೂ ಲಕೋಟೆ IIರ ಮೇಲೆ **"ಸರ್ಕಾರಿ ಮುದ್ರಣಾಲಯಗಳಿಗೆ ಕಾಗದ ಸರಬರಾಜು ಮಾಡಲು ದರಪಟ್ಟಿ ಹಾಗೂ ಮಾದರಿಗಳು"** ಎಂದು ನಿರ್ದಿಷ್ಟವಾಗಿ ದಪ್ಪ ಅಕ್ಷರಗಳಲ್ಲಿ ನಮೂದಿಸಿರಬೇಕು.
2. ಟೆಂಡರ್‌ದಾರರು ತಮ್ಮ ದರ ಪಟ್ಟಿಯೊಂದಿಗೆ ಬಡ್ಡಿ ರಹಿತ ರೂ. 1 ಲಕ್ಷ (ಒಂದು ಲಕ್ಷ ರೂಪಾಯಿಗಳು) ಭದ್ರತಾ ಠೇವಣಿಯನ್ನು **ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್** ರೂಪದಲ್ಲಿ ನಿರ್ದೇಶಕರು, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು, ಇವರ ಹೆಸರಿಗೆ ಸಂದಾಯವಾಗುವಂತೆ ಪಡೆದು ಲಕೋಟೆ-Iರಲ್ಲಿ ಲಗತ್ತಿಸಿರಬೇಕು. **ಡಿಮ್ಯಾಂಡ್ ಡ್ರಾಫ್ಟ್** ಲಗತ್ತಿಸಿಲ್ಲದ ಟೆಂಡರನ್ನು ತಿರಸ್ಕರಿಸಲಾಗುವುದು.
3. ಠೇವಣಿ ಹಣವನ್ನು ಟೆಂಡರಿನಲ್ಲಿ ಲಗತ್ತಿಸಿರುವ ಪಟ್ಟಿಯಲ್ಲಿನ ವಸ್ತುಗಳ ಖರೀದಿ ಬಗ್ಗೆ ನಿರ್ಧಾರ ತೆಗೆದುಕೊಂಡ ನಂತರ ಅನುತ್ತೀರ್ಣರಾದ ಸಂಸ್ಥೆಗಳಿಗೆ ಹಿಂದಿರುಗಿಸಲಾಗುವುದು.
4. ದರ ಪಟ್ಟಿಯಲ್ಲಿ ಸೂಚಿಸಿರುವ ದರಗಳು **ಕನಿಷ್ಟ ಒಂದು ವರ್ಷದ ವರೆವಿಗೂ ಮಾನ್ಯತೆ ಸಿಂಧುತ್ವ ಹೊಂದಿರಬೇಕು.**
5. ಸರಬರಾಜುದಾರರು ಪ್ರತಿ ಪೇಪರ್‌ನ ಸಿದ್ಧ ದಾಸ್ತಾನು ಹೊಂದಿದ್ದು ಬೇಡಿಕೆ ಸಲ್ಲಿಸಿದ ಒಂದು ವಾರದೊಳಗಾಗಿ ಸರಬರಾಜು ಮಾಡುವಂತಿರಬೇಕು ಹಾಗೂ ಬೇಡಿಕೆಯ ಪ್ರಕಾರ ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ ಬೆಂಗಳೂರು, ಪೀಣ್ಯ ಶೆಡ್, ಬೆಂಗಳೂರು, ಸರ್ಕಾರಿ ಹೊರವಲಯ ಮುದ್ರಣಾಲಯ, ಬೆಂಗಳೂರು, ಸರ್ಕಾರಿ ಪಠ್ಯ ಪುಸ್ತಕ ಮುದ್ರಣಾಲಯ, ಸರಸ್ವತಿಪುರಂ, ಮೈಸೂರು, ಸರ್ಕಾರಿ ಮುದ್ರಣಾಲಯ, ವಿಧಾನಸೌಧ ಘಟಕ, ಬೆಂಗಳೂರು ಹಾಗೂ ಸರ್ಕಾರಿ ಶಾಖಾ ಮುದ್ರಣಾಲಯಗಳಾದ ಧಾರವಾಡ, ಗುಲಬರ್ಗಾ, ಮಡಿಕೇರಿ, ತುಮಕೂರು, ಕೋಲಾರ, ಮಂಗಳೂರು ಮತ್ತು ಶಿವಮೊಗ್ಗ ಈ ಕಛೇರಿಗಳಿಗೆ ಕಾಗದವನ್ನು ಸರಬರಾಜು ಮಾಡಲು ಸಿದ್ಧರಿರಬೇಕು.
6. ಟೆಂಡರ್‌ದಾರರು ಪ್ರತಿ ಪೇಪರಿನ ಬ್ರಾಂಡ್‌ನ ಹೆಸರು, ಉದ್ದ, ಅಳತೆ, ಪೇಪರಿನ ಜಿಎಸ್‌ಎಂ ಗಳಿಗೆ ಅನುಗುಣವಾಗಿ ಪ್ರತಿ ಮೆಟ್ರಿಕ್ ಟನ್ನಿಗೆ ದರಗಳನ್ನು ಕಡ್ಡಾಯವಾಗಿ ದರ ಪಟ್ಟಿಯಲ್ಲಿ ನಮೂದಿಸಿರಬೇಕು ಹಾಗೂ ಈ ದರಗಳಿಗೆ ಅನ್ವಯಿಸುವ ತೆರಿಗೆಗಳನ್ನು ಪ್ರತ್ಯೇಕವಾಗಿ ನಮೂದಿಸಬೇಕು ಮತ್ತು ದರ ಪಟ್ಟಿಯೊಡನೆ ಪ್ರತಿ ಪೇಪರಿನ ಮಾದರಿಗಳನ್ನು ಕಡ್ಡಾಯವಾಗಿ ಟೆಂಡರಿನ ಜೊತೆಯಲ್ಲಿ ಲಕೋಟೆ IIರಲ್ಲಿ ಸಲ್ಲಿಸಬೇಕು. ಮಾದರಿಗಳನ್ನು ಕಳುಹಿಸದೆ ಇರುವ ದರ ಪಟ್ಟಿಗಳನ್ನು ಕಡ್ಡಾಯವಾಗಿ ತಿರಸ್ಕರಿಸಲಾಗುವುದು. ಹಾಗೂ ಪ್ರತಿ ಕಾಗದಗಳ ಮಾದರಿಗಳ ಮೇಲೆ ತಯಾರಿಕಾ ಸಂಸ್ಥೆಯ ಹೆಸರಿನ ಮೊಹರನ್ನು ಕಡ್ಡಾಯವಾಗಿ ಹಾಕಿರಬೇಕು. ಮಾದರಿಗಳನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

7. ಟೆಂಡರನ್ನು ಯಾವುದೇ ಕಾರಣವನ್ನು ನೀಡದೆ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಈ ಇಲಾಖೆಯ ನಿರ್ದೇಶಕರದಾಗಿರುತ್ತದೆ. ಈ ವಿಚಾರದಲ್ಲಿ ಉಂಟಾಗುವ ಯಾವುದೇ ವಿವಾದಗಳಲ್ಲಿ ಈ ಇಲಾಖೆಯ ನಿರ್ದೇಶಕರದೇ ಅಂತಿಮ ತೀರ್ಮಾನವಾಗಿರುತ್ತದೆ;

8. ವಿಜೇತ ಸರಬರಾಜುದಾರರು ಸರಬರಾಜು ಮಾಡುವ ಪೇಪರ್‌ಗಳನ್ನು ಕರ್ನಾಟಕ ರಾಜ್ಯ ಸರ್ಕಾರದ ಲಾಂಛನದ ವಾಟರ್ ಮಾರ್ಕ್ ಸಹಿತ ತಯಾರಿಸಿ ಸರಬರಾಜು ಮಾಡಬೇಕು.

9. ಟೆಂಡರ್‌ದಾರರ ಮೊಹರು ಮಾಡಿದ ಲಕೋಟೆ I ಮತ್ತು II ನ್ನು **ದಿನಾಂಕ: 12.01.2004ರ ಸಂಜೆ 4.30 ಗಂಟೆಯವರೆಗೆ** ಮುದ್ರಣ, ಲೇಖನ ಸಾಮಗ್ರಿಗಳ ನಿರ್ದೇಶಕರ ಕಛೇರಿ, ಸರ್ಕಾರಿ ಮುದ್ರಣಾಲಯ, 6/ಇ, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ. ರಸ್ತೆ, ಪೀಣ್ಯ, ಮೊದಲನೇ ಹಂತ, ತುಮಕೂರು ರಸ್ತೆ, ಬೆಂಗಳೂರು-58 ಇಲ್ಲಿ **ಸ್ವೀಕರಿಸಲಾಗುವುದು.**

10. **ಮೊಹರಾದ ಟೆಂಡರ್ ಲಕೋಟೆ I ನ್ನು ದಿನಾಂಕ: 14.01.2004 ರಂದು ಮಧ್ಯಾಹ್ನ 3 ಗಂಟೆಗೆ ತೆರೆಯಲಾಗುವುದು ಮತ್ತು ಲಕೋಟೆ II ನ್ನು ದಿನಾಂಕ:16.01.2004ರಂದು ಮಧ್ಯಾಹ್ನ 3 ಗಂಟೆಗೆ ತೆರೆಯಲಾಗುವುದು.**

11. ಟೆಂಡರನ್ನು ತೆರೆಯುವಾಗ ಹಾಜರಾಗುವ ಟೆಂಡರ್‌ದಾರರು ಅಥವಾ ಪ್ರತಿನಿಧಿಗಳು ಆಯಾ ಸಂಸ್ಥೆಯ ಗುರುತು ಚೀಟಿಯೊಂದಿಗೆ ಹಾಜರಾಗತಕ್ಕದ್ದು.

12. ಟೆಂಡರ್‌ದಾರರು ಸಲ್ಲಿಸಿರುವ ಮೊಹರಾದ ಲಕೋಟೆ Iನ್ನು ತೆರೆದಾಗ ಲಕೋಟೆ Iರ ಷರತ್ತು ಮತ್ತು ನಿಬಂಧನೆಗಳ ಮಾಹಿತಿಗಳನ್ನು ಪರಿಶೀಲಿಸಿ ಅರ್ಹ ಟೆಂಡರ್‌ದಾರರ ಲಕೋಟೆ II ನ್ನು ಮಾತ್ರ ದಿನಾಂಕ: 16.01.2004 ರಂದು 3.00 ಗಂಟೆಗೆ ತೆರೆಯಲಾಗುವುದು. ಪೂರ್ಣವಾದ ಮಾಹಿತಿಯನ್ನು ಒದಗಿಸದ ಟೆಂಡರನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.

13. ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯಿಂದ ಯಾವುದೇ ಕೆಲಸದ ದಿವಸದಂದು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ.

ನಿರ್ದೇಶಕರು.

**ಅನುಬಂಧ**

ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯಲ್ಲಿ ಮುದ್ರಣ/ ಲೇಖನ ಸಾಮಗ್ರಿ ಬಳಕೆಗೆ ಅಗತ್ಯವಿರುವ ವಿವಿಧ ಕಾಗದಗಳ ತಪಶೀಲು. ಪ್ರತಿ ಮೆಟ್ರಿಕ್ ಟನ್‌ಗೆ ದರ ಮತ್ತು ತೆರಿಗೆಯನ್ನು ಸೂಚಿಸತಕ್ಕದ್ದು.

**ಸೂಚನೆ:** ಮಾರಾಟ ತೆರಿಗೆ ಡಿಕ್ಲರೇಷನ್ ನಮೂನೆಯನ್ನು ನೀಡಲಾಗುವುದು.

1. **ಕ್ರಿಮ್‌ವೋ ಪ್ರಿಂಟಿಂಗ್ ಪೇಪರ್:**
   60 ಜಿ.ಎಸ್.ಎಂ ಮತ್ತು ಅದಕ್ಕಿಂತ ಮೇಲ್ಪಟ್ಟು, 15.7 ಕೆಜಿ ತೂಕ ಮೆಟ್ರಿಕ್ ಎ1/ ಎ2 ಅಳತೆ, ಶೀಟುಗಳಲ್ಲಿ ಮತ್ತು ರೀಲ್‌ಗಳಲ್ಲಿ 61 ಸೆಂಟಿ ಮೀಟರ್ -86 ಸೆಂಟಿಮೀಟರ್

2. **ಅನ್‌ಬ್ಲೀಚ್‌ಡ್ ಪ್ರಿಂಟಿಂಗ್ ಪೇಪರ್**
   60 ಜಿ.ಎಸ್.ಎಂ. ಮತ್ತು ಮೇಲ್ಪಟ್ಟು-15.7 ಕೆಜಿ ತೂಕ ಮೆಟ್ರಿಕ್ ಎ1/ ಎ2 ಅಳತೆ, ಶೀಟುಗಳಲ್ಲಿ ಮತ್ತು ರೀಲುಗಳಲ್ಲಿ 61 ಸೆಂಟಿ ಮೀಟರ್ -86 ಸೆಂಟಿಮೀಟರ್

3. **ಅಜುರ್‌ಲೈಡ್ ಪೇಪರ್**
   80 ಜಿಎಸ್‌ಎಂ ಮತ್ತು ಅದಕ್ಕಿಂತ ಮೇಲ್ಪಟ್ಟು, ಮೆಟ್ರಿಕ್ ಎ1/ ಎ2 ಅಳತೆ ಶೀಟುಗಳಲ್ಲಿ ಮತ್ತು ರೀಲುಗಳಲ್ಲಿ

4. **ಮ್ಯಾಪ್‌ಲಿಥೋ ಪೇಪರ್**
   60 ಜಿಎಸ್‌ಎಂ ಮತ್ತು ಅದಕ್ಕಿಂತ ಮೇಲ್ಪಟ್ಟು, ಮೆಟ್ರಿಕ್ ಎ1/ ಎ2 ಅಳತೆ ಶೀಟುಗಳಲ್ಲಿ ಮತ್ತು ರೀಲುಗಳಲ್ಲಿ

5. **ಡ್ಯೂಪ್ಲಿಕೇಟಿಂಗ್ ಪೇಪರ್**
   2.3 ಕೆ.ಜಿ. ಎಫ್.ಎಫ್ ಅಳತೆ ರೀಮುಗಳಲ್ಲಿ

6. **ಎಂ.ಜಿ. ಮತ್ತು ಎಂ.ಎಫ್. ವೈಟ್‌ಕವರ್ ಪೇಪರ್**
   70 ಜಿಎಸ್‌ಎಂ ಮತ್ತು ಅದಕ್ಕಿಂತ ಮೇಲ್ಪಟ್ಟು ಮೆಟ್ರಿಕ್ ಎ1/ ಎ2 ಅಳತೆ

7. **ಎಂ.ಜಿ. ಮತ್ತು ಎಂ.ಎಫ್. ಕಲರ್‌ಕವರ್ ಪೇಪರ್**
   70 ಜಿಎಸ್‌ಎಂ ಮತ್ತು ಅದಕ್ಕಿಂತ ಮೇಲ್ಪಟ್ಟು, ಮೆಟ್ರಿಕ್ ಎ1/ಎ2 ಅಳತೆ ಶೀಟುಗಳಲ್ಲಿ

8. **ಎಂ.ಜಿ.ಆರ್. ಕ್ರಾಫ್ಟ್‌ಪೇಪರ್**
   90 ಜಿ.ಎಸ್.ಎಂ. ಮೇಲ್ಪಟ್ಟು, 175 ಜಿ.ಎಸ್.ಎಂ. ಗೆ ಒಳಗೊಂಡಂತೆ ಮೆಟ್ರಿಕ್ ಎ1/ಎ2 ಅಳತೆ.

9. **ಆರ್ಟ್ ಕಾರ್ಡ್‌ಗಳು/ ಐವರಿ ಕಾರ್ಡ್‌ಗಳು**
   215 ಜಿ.ಎಸ್.ಎಂ. ನಿಂದ 300 ಜಿ.ಎಸ್.ಎಂ ವರೆಗೆ ಆರ್ಟ್ ಪೇಪರ್ 125 ಜಿ.ಎಸ್.ಎಂ. ನಿಂದ 175 ಜಿ.ಎಸ್.ಎಂ. ವರೆಗೆ

10. **ವೈಟ್ ಪಲ್ಪ್ ಬೋರ್ಡ್ಸ್**

ನಿರ್ದೇಶಕರು,
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

**OFFICE OF THE DIRECTOR OF PRINTING, STATIONERY AND PUBLICATIONS, GOVERNMENT PRESS, No.6/E, 1st CROSS K.I.A.D.B. PEENYA, TUMKUR ROAD, BANGALORE**

**TENDER NOTIFICATION**

**Letter No. P(P) 352/ 2003-04, Dated: 10th December, 2003**

**FOR THE SUPPLY OF PRINTING PAPER**

Sealed Tenders are invited from Registered Paper Manufacturing Mills for the supply of Paper for Printing and Stationery to Government Presses as per the Annexure enclosed.

The following documents are to be enclosed in sealed Cover-1 and Cover-2. The separate Cover I and Cover II should reach to this office on or before 12.01.2004 upto 4.30 PM.

**Conditions of Cover - I**

1. The copy of KST & CST Registration certificate along with KST Form No.3 and copy of the monthly returns filed for the month of November 2003 to be enclosed.
2. Copy of Income Tax assesment for the past 3 years i.e., 2000-01. 2001-02 and 2002-03 to be enclosed.
3. The audited balance sheets for the last 3 years. The turnover of tenderer should exceed Rs. 5 crorers (Rupees Five Crores only) in a year duly certified by the Charted Accountant to be enclosed.
4. The Tenderer should have the past experience of having supplied these papers on large scale to Government departments, worth Rs. 1 Crore per annum, during the past three years. The tenderer should furnish the certified copies from the concerned departments.

**Conditions of Cover- II**

1. The Tenderers should quote the rate of each items of paper for one metric ton along with Name of the Brand, GSM, Size and other details specifications and the sealed tender **Cover I should be superscribed to Certificates/ Documents for the supply of papers for Printing and Stationery and Cover II should be superscribed "Rate and Samples for the supply of papers for Printing and Stationery to Government Presses".**
2. Interest Free Earnest Money Deposit of Rs. 1 lakh (Rupees One Lakh only) in favour of the Director of Printing, Stationery and Publications Government Press, Peenya, Bangalore should be enclosed in Cover I only.
3. The E.M.D. will be returned to the unsuccessful tenderers, after decision taken by this Department. The quotation will not be considered with out E.M.D.
4. The quoted rates should be valied for one year.
5. The tenderer should maintain ready stocks of papers and should supply within one week from the date of Indent.
6. Tenderer should furnish the papers brand name, width of the paper, G.S.M. and other details/ specifications Rate should be quoted for one metric tonne. Quotation without samples will be rejected. Name of the tenderer should be mentioned on the samples furnished.
7. The Director of Printing, Stationery and Publications reserves the right of accepting or rejecting any tender for and onbehalf of the Government of Karnataka without assiging any reasons.
8. The successful tenderer should supply the **Water Mark Paper** along with Government of Karnataka Emblem.
9. The Sealed tenders will be accepted upto 4.30 pm on 12.01.2004 both (Cover I and Cover II) at the Office of the Director of Printing, Stationery and Publications, No. 6/E, 1st Cross, KIADB Road, Peenya Industrial Estate, 1st Phase, Bangalore-58.
10. The Cover I will be opened on 14.01.2004 at 3.00 and Cover II will be opened on 16.01.2004 at 3.00 pm of only those tenderers who have fulfilled conditions of Cover I.
11. Only one representative of the participating paper manufacturing mill can participate in the tender opening with due authorisation.
12. The Cover II of the only eligible tenderers will be opened on 16.01.2004 at 3.00 P.M.
13. Any other information may be obtained from this office during the office working hours.

Director.

**Annexure**

The List of papers are used in the Department of Printing, Stationery and Publications with specifications and size etc,.

**Note:** Tax declaration form will be issued against the paper supply.

**1. Cream Wove Printing Paper:**

60 GSM and Above, 15.7 Kg Metric A1, A2 size in sheets and in Reels of 61 cms and 86 cms.

2. **Unbleached Printing Paper:**
   60 GSM and Above, 15 Kg Metric A1, A2 size in sheets and in Reels of 61 cms and 86 cms.
3. **Azurlaid Paper:**
   80 GSM and above- Metric A1, A2 size in sheets and in Reels.
4. **Maplitho Paper:**
   60 GSM and above- Metric A1, A2 size in sheets and in Reels
5. **Duplicating Paper:**
   2.3 Kg- F.F size in Reems only.
6. **M.G. and M.F. white cover papers:**
   70 GSM and above Metric A1, A2 size
7. **M.G. and M.F. colour cover paper:**
   70 GSM and above Metric A1, A2 size- in sheets
8. **M.G.R. Kraft paper:**
   90 GSM and above (175 GSM) in Metric A1, A2 size
9. **Art cards/ Iovry cards 215 GSM to 300 GSM**
   Art paper, 125 GSM to 175 GSM
10. **White Pulp Boards**

PR-814

Director.
Government Press, Bangalore.

## P¼ñÌvP AÊ§Ì CÑñV

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ನಗರ ವಿಭಾಗ**

**àNQ¿ wN¤Êý ¿ÍPv¨**

**ಸಂಖ್ಯೆ: ಎ2. ಬಿಜಿಟಿ.ಜೆಬಿಐಸಿ. ಕಟ್ಟಡ. ಸಿಆರ್-16/03-04, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್, 2003**

ಬೆಂಗಳೂರು ನಗರ ವಿಭಾಗದ ವ್ಯಾಪ್ತಿಯಲ್ಲಿ ಬರುವ ಮಲ್ಲೇಶ್ವರಂ, 18ನೇ ಅಡ್ಡ ರಸ್ತೆಯಲ್ಲಿರುವ ಬೆಂಗಳೂರು ವಲಯ ಕಛೇರಿ ಹಿಂಭಾಗದ ಸಂಕೀರ್ಣದಲ್ಲಿ ಶೆಡ್ಯೂಲ್‌ನಲ್ಲಿ ತೋರಿಸಲಾದ ವಸತಿಗೃಹಗಳ ಕಟ್ಟಡಗಳನ್ನು ನಿರ್ಮಾಣ ಮಾಡಲು ಈ ವಿಭಾಗದಲ್ಲಿ 2003-04ನೇ ಸಾಲಿನಲ್ಲಿ ನೋಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಿಂದ ಮೊಹರಾದ ಟೆಂಡರನ್ನು ಕರೆಯಲಾಗಿದೆ. ಟೆಂಡರ್‌ನ್ನು ದಿನಾಂಕಃ 02.01.2004 ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್ ಫಾರಂನ್ನು ಈ ಕಛೇರಿ ಕೆಲಸದ ವೇಳೆಯಲ್ಲಿ ದಿನಾಂಕಃ 01.01.2004 ಬೆಲೆ ರೂ.200.00 (ತೆರಿಗೆಗಳು ಪ್ರತ್ಯೇಕ) ಪಾವತಿಸಿ ಪಡೆಯಬಹುದಾಗಿದೆ. ಒಂದು ವೇಳೆ ದಿನಾಂಕಃ 02.01.2004ರಂದು ಯಾವ ಗುತ್ತಿಗೆದಾರರು ಹಾಜರಾಗದಿದ್ದಲ್ಲಿ ಇದನ್ನೇ ಮರು ಟೆಂಡರ್ ಪ್ರಕಟಣೆಯೆಂದು ತಿಳಿದು 05.01.2004 ರಂದು 4.00 ಗಂಟೆಯ ಒಳಗೆ ಟೆಂಡರ್‌ನ್ನು ಸಲ್ಲಿಸಬಹುದಾಗಿರುತ್ತದೆ. ಟೆಂಡರ್ ಫಾರಂನ್ನು 04.01.2004 ರಂದು ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿರುತ್ತದೆ. ಕೆಲಸದ ವಿವರ ಈ ಕೆಳಗಿನ ಶೆಡ್ಯೂಲ್‌ನಂತಿರುತ್ತದೆ. ಶೆಡ್ಯೂಲ್‌ನಲ್ಲಿರುವ ಅಂದಾಜು ವೆಚ್ಚವು ಲೋಕೋಪಯೋಗಿ ಇಲಾಖೆಯ 2003-04 ಬೆಂಗಳೂರು ವೃತ್ತದ (ಶೆಡ್ಯೂಲ್ ದರ) ಮಂಜೂರಾದ ದರದಲ್ಲಿರುತ್ತದೆ. ಕಟ್ಟಡಗಳ ಅಂದಾಜು ವೆಚ್ಚವನ್ನು 2003-04ನೇ ಸಾಲಿನ ಲೋಕೋಪಯೋಗಿ ಇಲಾಖೆಯ ಶೆಡ್ಯೂಲ್ ದರದಲ್ಲಿ ಮಂಜೂರಾತಿ ಮಾಡಿಸಿಕೊಳ್ಳಲಾಗಿದೆ. ಅದರ ಪ್ರಕಾರ ಇಎಂಡಿಯನ್ನು ಸಲ್ಲಿಸಬೇಕಾಗುತ್ತದೆ. ಬಿಡ್ಡುದಾರರು 2003-04ನೇ ಸಾಲಿನ ಲೋಕೋಪಯೋಗಿ ಇಲಾಖೆಯ ಮಂಜೂರಾದ ದರದ ಮೇಲೆ ಶೇಕಡ ಹೆಚ್ಚು ಅಥವಾ ಕಡಿಮೆ ಟೆಂಡರ್‌ನ್ನು ಸಲ್ಲಿಸಬೇಕು.

**Ù¤öÌÑý**

| ಕ್ರಮ ಸಂಖ್ಯೆ | ಸ್ಥಳ | ಕೆಲಸದ ವಿವರ | ಅಂದಾಜು ವೆಚ್ಚ (ರೂ.ಗಳಲ್ಲಿ) | ಇ.ಎಂ.ಡಿ. (ಇಡಗಂಟು) |
|---|---|---|---|---|
| 1. | ಮಲ್ಲೇಶ್ವರಂ 18ನೇ ಅಡ್ಡ ರಸ್ತೆಯಲ್ಲಿರುವ ಬೆಂಗಳೂರು ವಲಯ ಕಛೇರಿ ಹಿಂಭಾಗದ ಸಂಕೀರ್ಣದಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ವಸತಿಗೃಹ ನಿರ್ಮಾಣ. | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ನಗರ ಉಪ ವಿಭಾಗ, ಬೆಂಗಳೂರು ರವರ ವಸತಿಗೃಹ | 860000.00 | 21500.00 |
| 2. | ಮಲ್ಲೇಶ್ವರಂ 18ನೇ ಅಡ್ಡ ರಸ್ತೆಯಲ್ಲಿರುವ ಬೆಂಗಳೂರು ವಲಯ ಕಛೇರಿ ಹಿಂಭಾಗದ ಸಂಕೀರ್ಣದಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ವಸತಿಗೃಹ ನಿರ್ಮಾಣ. | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ದಕ್ಷಿಣ ಉಪ ವಿಭಾಗ, ಬೆಂಗಳೂರು ರವರ ವಸತಿಗೃಹ (ಒಂದನೇ ಮಹಡಿ) | 860000.00 | 21500.00 |

**½ÃN¹¼Yçô ÝÊ¬ôYçô C¬Ê ÕÔÊYçô**

1. ಟೆಂಡರ್‌ದಾರರು 2003-04ನೇ ಸಾಲಿನಲ್ಲಿ ನೊಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಾಗಿರಬೇಕು.
2. ಟೆಂಡರ್ ಫಾರಂಗಳನ್ನು ರೂ. 2.00 ಕೋರ್ಟ್ ಫೀ ಸ್ಟಾಂಪ್ ಹಚ್ಚಿದ್ದ ಹಾಗೂ ಅಂದಾಜು ವೆಚ್ಚದ ಶೇಕಡ 2.50 ಇ.ಎಂ.ಡಿ. ಹಣವನ್ನು ಯಾವುದಾದರು ರಾಷ್ಟ್ರೀಕೃತ ಬ್ಯಾಂಕಿನಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ರವರ ಹೆಸರಿನಲ್ಲಿ ಡಿ.ಡಿ. ಪಡೆದು ಟೆಂಡರ್ ಫಾರಂ ಜೊತೆ ಲಗತ್ತಿಸಬೇಕು.

3. ಟೆಂಡರ್ ಫಾರಂಗಳನ್ನು ಸೀಲು ಮಾಡಿದ ಲಕೋಟೆಯಲ್ಲಿಟ್ಟು, ಲಕೋಟೆಯ ಮೇಲೆ ಮಲ್ಲೇಶ್ವರಂ 18ನೇ ಅಡ್ಡ ರಸ್ತೆಯಲ್ಲಿರುವ ಸಂಕೀರ್ಣದಲ್ಲಿ ಕಟ್ಟಡಗಳ ನಿರ್ಮಾಣವೆಂದು ನಮೂದಿಸತಕ್ಕದ್ದು.

4. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಇದೇ ಸಂಖ್ಯೆಯ ದಿನಾಂಕದ ಸಂಕ್ಷಿಪ್ತ ಟೆಂಡರ್ ಪ್ರಕಟಣೆಯಲ್ಲಿ ತಿಳಿಸಿರುವಂತೆ ಆಯಾ ದಿನಾಂಕಗಳಂದು ಕಛೇರಿ ವೇಳೆಯಲ್ಲಿ ಕೊಡಲಾಗುವುದು. ಟೆಂಡರ್‌ಫಾರಂ ಬೆಲೆ ರೂ.200.00 (ತೆರಿಗೆಗಳು ಪ್ರತ್ಯೇಕ).

5. ಕೆಲಸಗಳನ್ನು ಈ ಕಛೇರಿಯಿಂದ ನೀಡಲಾಗುವ ಡ್ರಾಯಿಂಗ್ ಹಾಗೂ ವಿತರಣೆ ಮಾದರಿ ರೀತ್ಯವೇ ಮಾಡಬೇಕು. ಹಾಗೂ ಅಂದಾಜು ಪಟ್ಟಿಗಳನ್ನು ತಯಾರಿಸಿ ಪಿ.ಡಬ್ಲ್ಯೂ.ಡಿ. ಯಿಂದ ತಾಂತ್ರಿಕ ಪರಿಶೀಲನೆ ಮಾಡಿಸಿ (ತಾಂತ್ರಿಕ ಪರಿಶೀಲನೆ ವೆಚ್ಚವನ್ನು ಇಲಾಖಾ ವತಿಯಿಂದ ಭರಿಸಲಾಗುವುದು). ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ ಇವರಿಂದ ಒಪ್ಪಿಗೆ ಪಡೆದ ನಂತರ ಕೆಲಸ ನಿರ್ವಹಿಸಬೇಕು.

6. ದಿನಾಂಕಃ 02.01.2004ರ ಸಂಜೆ 4.00 ಗಂಟೆ ವೇಳೆಯವರೆಗೆ ಟೆಂಡರ್‌ನ್ನು ಈ ಕಛೇರಿಯಲ್ಲಿ ಅದಕ್ಕೆಂದೇ ಇಟ್ಟಿರುವ ಟೆಂಡರ್ ಡಬ್ಬದಲ್ಲಿ ಹಾಕಬೇಕು.

7. ದಿನಾಂಕಃ 02.01.2004 ರಂದು ಸಂಜೆ 5.00 ಗಂಟೆಗೆ ಹಾಜರಿರುವ ಗುತ್ತಿಗೆದಾರರ/ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.

8. ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಇರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.

9. ಪಿ.ಡಬ್ಲ್ಯೂ.ಡಿ. ದರಗಳಲ್ಲದ ಕೆಲಸ ವಸ್ತುಗಳಿಗೆ ಡಾಟಾ ಶೀಟ್ ತಯಾರಿಸಿ ಪಿ.ಡಬ್ಲ್ಯೂ.ಡಿ. ಅಧೀಕ್ಷಕ ಅಭಿಯಂತರರಿಂದ ಅಂಗೀಕರಿಸಲ್ಪಟ್ಟ ದರವನ್ನು ಅಳವಡಿಸಿ ಅಂದಾಜು ಪಟ್ಟಿ ತಯಾರಿಸಲಾಗುವುದು.

10. ಯಶಸ್ವಿ ಟೆಂಡರ್‌ದಾರರು ಕೆಲಸದ ಆದೇಶ ಕೊಟ್ಟ 3 ದಿನಗಳೊಳಗೆ ಈ ಕಛೇರಿಯಲ್ಲಿ ರೂ. 200.00ರ ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಟ್ಟು ಕೆಲಸದ ಆದೇಶ ಪಡೆಯುವುದು.

11. ಗುತ್ತಿಗೆದಾರರು ಮಾಡಬಹುದಾದ ಯಾವ ಷರತ್ತುಗಳನ್ನು ಅಂಗೀಕರಿಸುವುದಿಲ್ಲ.

12. ಇ.ಎಂ.ಡಿ. ಹಣವನ್ನು ಯಶಸ್ವಿ ಟೆಂಡರ್‌ದಾರರಿಗೆ ಟೆಂಡರ್ ಕ್ರಮ ಮುಗಿದ ನಂತರ ಚೆಕ್ ಮೂಲಕ ಹಿಂತಿರುಗಿಸಲಾಗುವುದು.

13. ಯಶಸ್ವಿ ಟೆಂಡರ್‌ದಾರರಿಂದ ಇ.ಎಂ.ಡಿ. ಜೊತೆಯಲ್ಲಿ ಶೇಕಡ 10ರಷ್ಟನ್ನು ಅವರ ಬಿಲ್ಲುಗಳಲ್ಲಿ ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ಅವರಿಗೆ ಒಪ್ಪಿಸಿದ ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಹಾಗೂ ಅಂತಿಮ ಬಿಲ್ ಪಾವತಿಯಾದ 6 ತಿಂಗಳ ನಂತರ ಹಿಂತಿರುಗಿಸಲಾಗುವುದು.

14. ಪ್ರತಿ ಬಿಲ್‌ನಲ್ಲಿ ಶೇಕಡ 2 ರಷ್ಟನ್ನು ಆದಾಯ ತರಿಗೆ ಹಾಗೂ ಅದರ ಮೇಲೆ ಚಾಲ್ತಿಯಲ್ಲಿರುವ ಸರ್ಚಾರ್ಜನ್ನು ಮತ್ತು ಶೇಕಡ 5 ರಷ್ಟನ್ನು ಮಾರಾಟ ತೆರಿಗೆಯಾಗಿ ಹಿಡಿಯಲಾಗುವುದು.

15. ಈ ಗುತ್ತಿಗೆಯ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ವೃತ್ತ ಇವರ ನಿರ್ಧಾರವೇ ಅಂತಿಮ ನಿರ್ಧಾರವಾಗಿರುತ್ತದೆ.

16. ಟೆಂಡರ್‌ದಾರರು ಅಂದಾಜು ಪಟ್ಟಿಯಲ್ಲಿ ನಮೂದಿಸಿರುವ ದರಗಳಿಗೆ ಪಿ.ಡಬ್ಲ್ಯೂ.ಡಿ. 2003-04ನೇ ಸಾಲಿನ ದರಕ್ಕಿಂತ ಶೇಕಡ ಎಷ್ಟು ಹೆಚ್ಚು ಅಥವಾ ಎಷ್ಟು ಕಡಿಮೆ ಎಂಬುದನ್ನು ನಮಾದಿಸಬೇಕು.

17. ಕೆಲಸದ ಆದೇಶ ನೀಡಿದ ದಿನಾಂಕದಿಂದ 6 ತಿಂಗಳೊಳಗೆ ಕೆಲಸವನ್ನು ಪೂರೈಸತಕ್ಕದ್ದು.

18. ಇತರೆ ಇಲಾಖೆಗಳಿಂದ ಅಂದರೆ ಕೆ.ಇ.ಬಿ; ಒಳಚರಂಡಿ, ನಗರ ಪಾಲಿಕೆ, ಇಲಾಖೆಯಿಂದ ಕಟ್ಟಡದ ಕಾರ್ಯದ ಸಲುವಾಗಿ ಅನುಮತಿ ನೀಡಿ ಪಡೆಯತಕ್ಕದ್ದು.

19. ಟೆಂಡರ್‌ರುದಾರರ ವತಿಯಿಂದ ನೇಮಿಸತಕ್ಕ ಕೆಲಸಗಾರರ ವಿವರಗಳನ್ನು ಈ ಕಛೇರಿಗೆ ನೀಡತಕ್ಕದ್ದು. ಮತ್ತು ಕಟ್ಟಡದ ಕೆಲಸದ ಅವಧಿಯಲ್ಲಿ ಯಾವುದೇ ವಿಧವಾದ ಆಸ್ತಿ; ನಷ್ಟ ಸಂಭವಿಸಿದಲ್ಲಿ ಸಂಬಂಧಪಟ್ಟ ಗುತ್ತಿಗೆದಾರರೇ ಹೊಣೆಗಾರರಾಗುತ್ತಾರೆ.

20. ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು:ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪರಿಶೀಲಿಸಿ ಪ್ರಮಾಣೀಕರಿಸಿದ ನಂತರ ಬಿಲ್ಲನ್ನು ಪಾವತಿಸಲಾಗುವುದು.

21. ಟೆಂಡರ್‌ದಾರರು 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ವ್ಯಕ್ತಿಗಳನ್ನು ಕೆಲಸಕ್ಕೆ ನಿಯೋಜಿಸಬಾರದು.

22. ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ಅವರು ನೋಡಬಯಸಿದ್ದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.

23. ಸಾರ್ವತ್ರಿಕ ರಜೆದಿನಗಳಲ್ಲಿ ಕೆಲಸ ಮಾಡಬೇಕಾದರೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಅನುಮತಿಯನ್ನು ಬರವಣಿಗೆಯಲ್ಲಿ ಪಡೆಯತಕ್ಕದ್ದು.

24. ಟೆಂಡರ್‌ದಾರರು ನಿರ್ವಹಿಸಿದ ಕೆಲಸಗಳ ಪೈಕಿ ಕಟ್ಟಡದ ಯಾವುದೇ ಕೆಲಸ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ತೃಪ್ತಿಕರವಾಗದೇ ಇದ್ದಲ್ಲಿ ಆ ಕೆಲಸಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ತೀರ್ಮಾನದಂತೆ ಹಣ ಪಾವತಿ ಮಾಡಲಾಗುವುದಿಲ್ಲ.

25. ಕೆಲಸಗಳು ಮುಗಿದ ನಂತರ ಅದರ ಅಳತೆಯನ್ನು ಲೋಕೋಪಯೋಗಿ ಇಲಾಖೆಯವರು ನಿಗದಿ ಪಡಿಸಿರುವ ಮಾಪನ ಪದ್ಧತಿಯ ರೀತ್ಯ ಮಾಡಲಾಗುವುದು.

26. ಕೆಲಸದ ಆದೇಶ ನೀಡಿದ ದಿನದಿಂದ ಕರಾರು ಪತ್ರದಲ್ಲಿ ನಿಗಧಿ ಪಡಿಸಿದ ಅವಧಿಯೊಳಗೆ ಕೆಲಸವನ್ನು ಮುಗಿಸದೆ ಇದ್ದ ಪಕ್ಷದಲ್ಲಿ ಅಂದಾಜು ವೆಚ್ಚದ ಶೇಕಡ ಒಂದರಷ್ಟನ್ನು ಅಥವಾ ಅರಣ್ಯ ಸಂರಕ್ಷಣಾಧಿಕಾರಿಗಳು: ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನಿಗಧಿಪಡಿಸಿದ ಮೊತ್ತವನ್ನು ದಂಡವಾಗಿ ಕಟ್ಟಬೇಕಾಗುತ್ತದೆ.

27. ಈ ಕೆಲಸ ಕೈಗೊಳ್ಳುವಾಗ ಟೆಂಡರುದಾರರಿಂದ ಇಲಾಖೆಗೆ ಯಾವುದಾದರೂ ಪರಿಹಾರ : ದಂಡ ಬಾಕಿ ಬರಬೇಕಾಗಿದ್ದಲ್ಲಿ ಅದನ್ನು ಅವರ ಹೆಸರಿನಲ್ಲಿರುವ ಭದ್ರತಾ ಠೇವಣಿಯಲ್ಲಿ ಮುರಿದು ಕೊಳ್ಳಲಾಗುವುದು.

28. ಟೆಂಡರುದಾರರು ನಿಗಧಿತ ಅವಧಿಯಲ್ಲಿ ಕೆಲಸವನ್ನು ಪೂರೈಸದೆ ಅಪೂರ್ಣ ಸ್ಥಿತಿಯಲ್ಲಿ ಬಿಟ್ಟು ಹೋದ ಪಕ್ಷದಲ್ಲಿ ಸದರಿ ಕೆಲಸವನ್ನು ಟೆಂಡರುದಾರರ ಸ್ವಂತ ಜವಾಬ್ದಾರಿ ಮತ್ತು ವೆಚ್ಚದಲ್ಲಿ ಇಲಾಖಾವತಿಯಿಂದ ಮಾಡಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ

ಸಂಪೂರ್ಣ ಹಕ್ಕು ಇರುತ್ತದೆ. ಮತ್ತು ಈ ಸಂಬಂಧ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಕೆಲಸದ ಬಗ್ಗೆ ನೀಡಿದ ಧೃಡೀಕರಣ ಪತ್ರವೇ ಅಂತಿಮವಾಗಿರುತ್ತದೆ.

29. ಬಿಲ್ಲುಗಳನ್ನು ಪಾವತಿಗೆ ಸಲ್ಲಿಸುವಾಗ ನಿಗಧಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

30. ಟೆಂಡರುದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಅಧಿಕಾರವಿರುತ್ತದೆ. ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.

31. ಕೆಲಸದಲ್ಲಿ ಏನಾದರೂ ಬದಲಾವಣೆ : ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ ಯಾವುದೇ ರೀತಿಯ ಪರಿಹಾರವನ್ನು ನೀಡಲು ಇಲಾಖೆ ಬದ್ದವಾಗಿರುವುದಿಲ್ಲ.

32. ಕೆಲಸದ ಅವಧಿಯ ವಿಸ್ತರಣೆ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ, ಬೆಂಗಳೂರು ಇವರು ನೀಡಿದ ಆದೇಶವೇ ಅಂತಿಮವಾಗಿದ್ದು ಇದನ್ನು ಎಲ್ಲಾ ಟೆಂಡರುದಾರರು ಒಪ್ಪಿಕೊಳ್ಳಲು ಬದ್ದರಾಗಿರುತ್ತಾರೆ.

33. ಟೆಂಡರುದಾರರು ನಿರ್ವಹಿಸಿದ ಕೆಲಸದ ಗುಣಮಟ್ಟ ಕಳಪೆಯಾಗಿದ್ದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನಿಗದಿಪಡಿಸುವ ದಂಡವನ್ನು ಕಟ್ಟಬೇಕು ಹಾಗೂ ಸದರಿ ಕೆಲಸವನ್ನು ಟೆಂಡರುದಾರರ ವೆಚ್ಚದಲ್ಲಿ ಸರಿಪಡಿಸಬೇಕು.

34. ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ ಪೂರ್ವಾನುಮತಿ ಇಲ್ಲದೆ ಬೇರೆಯವರಿಗೆ ಗುತ್ತಿಗೆದಾರರು ವಹಿಸಿಕೊಟ್ಟಲ್ಲಿ ಕೆಲಸದ ಆದೇಶವನ್ನು ರದ್ದು ಪಡಿಸುವುದಲ್ಲದೆ ಇ.ಎಂ.ಡಿ. ಮತ್ತು ಎಸ್.ಡಿ.ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

35. ಕೆಲಸದ ಅವಧಿಯಲ್ಲಿ ಗುತ್ತಿಗೆದಾರರು ನೇಮಿಸಿಕೊಂಡ ನೌಕರರಿಗೆ ಏನಾದರೂ ಪೆಟ್ಟು ಬಿದ್ದಲ್ಲಿ ಅಥವಾ ಆಕಸ್ಮಿಕ ಸಂಭವಿಸಿದಲ್ಲಿ ಅವರ ಚಿಕಿತ್ಸಾ ವೆಚ್ಚವನ್ನು ಟೆಂಡರುದಾರರೇ ಭರಿಸಬೇಕು. ಒಂದು ವೇಳೆ ಈ ವೆಚ್ಚವನ್ನು ಇಲಾಖೆ ಭರಿಸಿದಲ್ಲಿ ಟೆಂಡರುದಾರರಿಗೆ ನೀಡಬೇಕಾದ ಬಿಲ್ಲಿನ ಹಣದಲ್ಲಿ ಸದರಿ ಮೊತ್ತವನ್ನು ಮುರಿದುಕೊಳ್ಳಲಾಗುವುದು.

36. ಕೆಲಸದ ಪ್ರದೇಶದಲ್ಲಿ ಕೆಲಸ ನಿರ್ವಹಿಸುವ ಕೆಲಸಗಾರರ ಸುರಕ್ಷತೆಗೆ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.

37. ಕೆಲಸ ಪ್ರಾರಂಭಿಸಿದ್ದಲ್ಲಿ ಇಲಾಖಾ ವತಿಯಿಂದ ಯಾವುದೇ ವಿಳಂಬವಾದಲ್ಲಿ ಟೆಂಡರುದಾರರಿಗೆ ಈ ಸಂಬಂಧ ಯಾವುದೇ ಪರಿಹಾರ ನೀಡಲಾಗುವುದಿಲ್ಲ.

38. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.

39. ಬಿಲ್ಲಿನ ಹಣವನ್ನು ಯಶಸ್ವಿ ಟೆಂಡರದಾರಿಗೆ ಪೂರ್ಣಗೊಂಡ ಕೆಲಸಕ್ಕೆ ಕ್ರಾಸ್ಡ್ ಚೆಕ್ ಮೂಲಕ ನೀಡಲಾಗುವುದು.

40. ಟೆಂಡರುದಾರರು ನಮೂದಿಸುವ ದರವು ನಿಯಮಾವಳಿಗಳ ಪ್ರಕಾರ ಮಾರಾಟ ತೆರಿಗೆದರವನ್ನು ಒಳಗೊಂಡಿರಬೇಕು. ಈ ಬಗ್ಗೆ ಗುತ್ತಿಗೆದಾರರಿಗೆ ಯಾವುದೇ ಹೆಚ್ಚುವರಿ ಹಣ ನೀಡಲಾಗುವುದಿಲ್ಲ.

41. ಮೇಲೆ ಹೇಳಿದ ಟೆಂಡರ್ ನಿಯಮಗಳಿಗೆ ಒಪ್ಪದೇ ಇದ್ದ ಟೆಂಡರುದಾರರ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

42. ಯಶಸ್ವಿ ಟೆಂಡರುದಾರರು ನಮೂದಿಸಿರುವ ದರದಲ್ಲಿ ಯಾವುದೇ ಕಾರಣದಿಂದ ಅಂದರೆ ಕಾಲ ಹೆಚ್ಚಳ ಹೊಸದರಪಟ್ಟಿಯ ಪ್ರಕಟಣೆ ಮುಂತಾದವು ಅಥವಾ ಇನ್ನಾವುದೇ ಕಾರಣದಿಂದ ಅವಧಿ ವಿಸ್ತರಣೆಯಿಂದಲೂ ನಮೂದಿಸಿದ ದರಕ್ಕಿಂತ ಹೆಚ್ಚು ಮಾಡಲಾಗುವುದಿಲ್ಲ.

43. ಕಾರಣಾಂತರಗಳಿಂದ ಯಾವುದೇ ಕೆಲಸವನ್ನು ಪೂರ್ಣವಾಗಿ ನಿಲ್ಲಿಸಬೇಕಾದಲ್ಲಿ ಅಂತಹ ಗುತ್ತಿಗೆದಾರರಿಗೆ ಇ.ಎಂ.ಡಿ. ಹಣವನ್ನು ಮಾತ್ರ ಹಿಂದಿರುಗಿಸಲಾಗುತ್ತದೆ. ಮತ್ತು ಈ ಬಗ್ಗೆ ಯಾವುದೇ ರೀತಿ ಪರಿಹಾರ ನೀಡಲಾಗುವುದಿಲ್ಲ.

44. ನಮೂದಿಸಿರುವ ದರವು ಕೆಲಸದ ಸ್ಥಳದಲ್ಲಿ ಸ್ವಚ್ಛ ಮಾಡಿರುವಿಕೆ ಒಳಗೊಂಡಿರಬೇಕು ಮತ್ತು ಈ ದರದಲ್ಲಿ ಎಲ್ಲಾ ಋತುಮಾನ ಭೂಮಿಯ ಪರಿಸ್ಥಿತಿಗಳಲ್ಲೂ ಕೆಲಸ ಮಾಬೇಕು.

45. ಪಿ.ಡಬ್ಲ್ಯೂ.ಡಿ. ದರಪಟ್ಟಿಯಲ್ಲಿ ನಮೂದಿಸಿರುವಂತೆ ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರ ಕಟ್ಟಡದ ಕೆಲಸಕ್ಕೆ ಉಪಯೋಗಿಸಬೇಕು.

46. ಕೆಲಸದ ಜಾಗದಲ್ಲಿ ಶೌಚಾಲಯದ ವ್ಯವಸ್ಥೆಯನ್ನು ಕಾರ್ಮಿಕರಿಗೆ ಮಾಡಿಕೊಡುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ.

47. ನಮೂದಿಸಿದ ದರಗಳಲ್ಲಿ ಸಾಮಗ್ರಿಗಳ ಬೆಲೆ ಮತ್ತು ಸಾಗಾಣಿಕೆ ವೆಚ್ಚ ಸೇರಿರುತ್ತದೆ ಎಂದು ತಿಳಿಯಲಾಗುವುದು.

48. ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರವೇ ಕೆಲಸದ ಸ್ಥಳದಲ್ಲಿ ದಾಸ್ತಾನು ಮಾಡಬೇಕು. ತಿರಸ್ಕೃತವಾದ ಸಾಮಗ್ರಿಗಳನ್ನು ಕೆಲಸದ ಪ್ರದೇಶದಿಂದ ಕೂಡಲೇ ಸಾಗಿಸಬೇಕು.

49. ಕೆಲಸದ ಸ್ಥಳದಿಂದ ಅನುಪಯೋಗಿ ವಸ್ತುಗಳನ್ನು ಗುತ್ತಿಗೆದಾರರು ತೆಗೆಯದಿದ್ದಲ್ಲಿ ಅಂದಾಜು ವೆಚ್ಚದ ಮೇಲೆ ಶೇಕಡ 0.5ನ್ನು ಬಿಲ್ಲುಗಳಲ್ಲಿ ಕಡಿತಗೊಳಿಸಲಾಗುವುದು.

50. ಟೆಂಡರ್‌ದಾರರು ನಮೂದಿಸಿರುವ ದರಗಳು ಕೆಲಸ ಮಾಡುವ ಸ್ಥಳದಲ್ಲಿ ಕೆಲಸ ಪ್ರಾರಂಭಿಸುವ ಮುನ್ನ ಸದರಿ ಪ್ರದೇಶವನ್ನು ಸಮತಟ್ಟಾಗಿಸುವ ಕೆಲಸವು ಸೇರಿರುತ್ತದೆ ಎಂದು ತಿಳಿಯುವುದು.

51. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೊಂದಣಿಯನ್ನು ಮಾಡಲಾಗುವುದಿಲ್ಲ.

52. ಷೆಡ್ಯೂಲ್‌ನಲ್ಲಿರುವ ಅಂದಾಜು ವೆಚ್ಚವು ಲೋಕೋಪಯೋಗಿ ಇಲಾಖೆಯ 2003-04ರ ಬೆಂಗಳೂರು ವೃತ್ತದ (ಷೆಡ್ಯೂಲ್ ದರ) ಮಂಜೂರಾದ ದರದಲ್ಲಿರುತ್ತದೆ. ಕಟ್ಟಡಗಳ ಅಂದಾಜು ವೆಚ್ಚವನ್ನು 2003-04ನೇ ಸಾಲಿನ ಲೋಕೋಪಯೋಗಿ ಇಲಾಖೆಯ ಷೆಡ್ಯೂಲ್ ದರದಲ್ಲಿ ಮಂಜೂರು ಮಾಡಲ್ಪಟ್ಟಿರುತ್ತದೆ. ಯಾವುದೇ ಕಾರಣದಿಂದ 2004-05 ನೇ ಸಾಲಿಗೆ ಸದರಿ ಕೆಲಸ ಮುಂದುವರಿದಲ್ಲಿ (ಅಂದರೆ ಆರು ತಿಂಗಳ ಗಡುವಿನೊಳಗೆ) 2003-04ನೇ ಸಾಲಿನ ದರದಂತೆ ಮಂಜೂರಾದ ಅಂದಾಜು ಪಟ್ಟಿಯ ದರಗಳ ಪ್ರಕಾರವೇ ಕಾರ್ಯ ನಿರ್ವಹಿಸಬೇಕಾಗಿರುತ್ತದೆ.

53. ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ವಸತಿಗೃಹಗಳ ಅಂದಾಜು ಪಟ್ಟಿಯ ಮೊತ್ತವು ಹೆಚ್ಚಾಗಬಹುದು ಅಥವಾ ಕಡಿಮೆಯಾಗಬಹುದು.

54. ಕರ್ನಾಟಕ ಮಾರಾಟ ತೆರಿಗೆ ಅಡಿಯಲ್ಲಿ ನೋಂದಣಿದಾರರಲ್ಲದವರು ಟೆಂಡರ್‌ನಲ್ಲಿ ಭಾಗವಹಿಸುವಂತಿಲ್ಲ. ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (Sales Tax Clearance Certificate) ಲಗತ್ತಿಸಬೇಕು.

**ಉಪ ಅರಣ್ಯ ಸಂರಕ್ಷಣಾಧಿಕಾರಿ,**
**ಬೆಂಗಳೂರು ನಗರ ವಿಭಾಗ, ಬೆಂಗಳೂರು.**

ಪಿ.ಆರ್.819

## ಜಲ ಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

## ಅಲ್ಪಾವಧಿ ಟೆಂಡರ್ ಪ್ರಕಟಣೆ2003-04

**ನಂ. ಬಿಡಿಯನ್-4 ಪಿ.ಬಿ-2: ಟೆಂಡರು ಪ್ರಕಟಣೆ: 2003-2004-3091/13, ದಿನಾಂಕ: 12ನೇ ಡಿಸೆಂಬರ್, 2003**

ಮೊಹರಾದ ಐಟಂವಾರು ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಈ ಕೆಳಕಾಣಿಸಿರುವ ಕಾಮಗಾರಿಗಳಿಗೆ ನೊಂದಾಯಿಸಲ್ಪಟ್ಟಿರುವ ಅರ್ಹ ಗುತ್ತಿಗೆದಾರರಿಂದ ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಇಂಜಿನಿಯರ್, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ ಭದ್ರಾವತಿ ಇವರಿಂದ ಆಹ್ವಾನಿಸಲಾಗಿದೆ.

ತುಂಬಲಾದ ಟೆಂಡರ್‌ಗಳನ್ನು ದಿನಾಂಕ: 16.01.2004 ಸಂಜೆ. 4.00 ಗಂಟೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಹಾಗೂ ಟೆಂಡರ್‌ಗಳನ್ನು ಸಾಧ್ಯವಾದಲ್ಲಿ ಅದೇ ದಿನ ಸಂಜೆ 4.30 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೋಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

1. ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ: 12.01.04 ಸಂಜೆ 5.30 ರವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: 14.01.2004
3. ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: 16.01.2004
4. ಕೆಲಸವನ್ನು ಮುಗಿಸುವ ಅವಧಿ: ಆರು ತಿಂಗಳು
5. ಟೆಂಡರ್ ಕರೆ: ಮೊದಲನೇ ಕರೆ

ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್‌ನಲ್ಲಿ ಸೂಚಿಸಿರುವ ದಿನಾಂಕಗಳು ರಜಾ ದಿನವೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನವನ್ನು ಟೆಂಡರಿನಲ್ಲಿ ತಿಳಿಸಿದ ದಿನಾಂಕದ ಬದಲಾಗಿ ಪರಿಗಣಿಸಲಾಗುವುದು.

| ಕ್ರಮ ಸಂಖ್ಯೆ | ಕೆಲಸದ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ | ಇ.ಎಂ.ಡಿ. | ಟೆಂಡರ್ ಫಾರಂ ಬೆಲೆ (ತೆರಿಗೆಗಳು ಸೇರಿ) | ಗುತ್ತಿಗೆದಾರರ ದರ್ಜೆ |
|---|---|---|---|---|---|
| 1 | 2 | 3 | 4 | 5 | 6 |
| 1. | ಭದ್ರಾ ಬಲದಂಡೆ ಕಾಲುವೆ 76.50 ಕಿ.ಮೀನಲ್ಲಿ ಗಾಡಿ ಸೇತುವೆಯನ್ನು ನಿರ್ಮಿಸುವುದು. | ರೂ. 10,54,702 | 15,900/- | 1000/- | ಎರಡನೇ ದರ್ಜೆ ಮತ್ತು ಮೇಲ್ಪಟ್ಟು |
| 2. | ಭದ್ರಾ ಬಲದಂಡೆ ಕಾಲುವೆ 98.90 ಕಿ.ಮೀನಲ್ಲಿ ಗಾಡಿ ಸೇತುವೆಯನ್ನು ನಿರ್ಮಿಸುವುದು. | ರೂ. 11,38,720 | 17,100/- | 1000/- | ಎರಡನೇ ದರ್ಜೆ ಮತ್ತು ಮೇಲ್ಪಟ್ಟು |
| 3. | ಭದ್ರಾ ಬಲದಂಡೆ ಕಾಲುವೆ 55.40 ಕಿ.ಮೀನಲ್ಲಿ ಗಾಡಿ ಸೇತುವೆಯನ್ನು ನಿರ್ಮಿಸುವುದು. | ರೂ. 14,37,693 | 21,600/- | 1000/- | ಎರಡನೇ ದರ್ಜೆ ಮತ್ತು ಮೇಲ್ಪಟ್ಟು |

**ಸೂಚನೆಗಳು:**

1. ನಿಗದಿತ ಟೆಂಡರ್ ಫಾರಂನಲ್ಲಿ ಕಾಮಗಾರಿಯ ವಿವರಗಳನ್ನು ಮತ್ತು ಟೆಂಡರಿನ ಷರತ್ತುಗಳನ್ನು ಒದಗಿಸಲಾಗಿದೆ. ಟೆಂಡರ್‌ದಾರರು ಹಾಕುವಾಗ ಪಾಲಿಸಬೇಕಾಗಿರುವ ನಿಬಂಧನೆಗಳನ್ನು ಸಹ ಒದಗಿಸಲಾಗಿದೆ. ಆದರಂತೆ ಟೆಂಡರ್ ಹಾಕಬೇಕು.
2. ಇ.ಎಂ.ಡಿ. ಮೊತ್ತವನ್ನು ಕರ್ನಾಟಕ ಸರ್ಕಾರದ ಟ್ರಜರಿ ಚಲನ್, ಡಿಮ್ಯಾಂಡ್ ಡ್ರಾಫ್ಟ್, ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟ್ ರೂಪದಲ್ಲಿ ಸೂಚಿಸಿರುವ ಮೊತ್ತಕ್ಕೆ ಕಾರ್ಯಪಾಲಕ ಇಂಜಿನಿಯರ್, ನಂ. 4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ ಇವರ ಹೆಸರಿನಲ್ಲಿ ಪಾವತಿಸಿರಬೇಕು. ತಪ್ಪಿದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
3. ಯಾವುದೇ ನಿಬಂಧನೆಗಳನ್ನು ಒಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
4. ಶೇವಣಿ ಕ್ರಮಬದ್ಧತೆಯು (ವ್ಯಾಲಿಡಿಟಿಪೀರಿಯಡ್) ಒಂದು ನೂರಾ ಇಪ್ಪತ್ತು ದಿನಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
5. ಟೆಂಡರನ್ನು ಯಾವುದೇ ಕಾರಣವಿಲ್ಲದೆ ಮುಂದೂಡುವ, ತಿರಸ್ಕರಿಸುವ ಅಧಿಕಾರವು ಕಾರ್ಯಪಾಲಕ ಅಭಿಯಂತರವರಿಗೆ ಇರುತ್ತದೆ.
6. ಇಲಾಖಾವತಿಯಿಂದ ಯಾವುದೇ ಕಾಮಗಾರಿ ನಿರ್ಮಾಣ ವಸ್ತುಗಳನ್ನು ವಿತರಿಸಲಾಗುವುದಿಲ್ಲ. ಗುತ್ತಿಗೆದಾರರೇ ಸ್ವಂತ ಏರ್ಪಾಟು ಮಾಡಿಕೊಳ್ಳತಕ್ಕದ್ದು.
7. ಜೇಷ್ಠತೆಯ ಆಧಾರದ ಮೇಲೆ ಗುತ್ತಿಗೆದಾರರ ವಿಪತ್ರಗಳನ್ನು ಪಾವತಿಸಲಾಗುವುದು.
8. ಸೇತುವೆ ನಿರ್ಮಾಣ ಕಾಮಗಾರಿಯಲ್ಲಿ ಅನುಭವವುಳ್ಳ ಗುತ್ತಿಗೆದಾರರಿಗೆ ಪ್ರಾಮುಖ್ಯತೆ ನೀಡಲಾಗುವುದು.
9. ರೂ. 10.00 ಲಕ್ಷಗಳ ಮೊತ್ತದ ಸೇತುವೆ ನಿರ್ಮಾಣ ಕಾಮಗಾರಿಗಳನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸಿದಂತ ದಾಖಲಾತಿಗಳನ್ನು ಅರ್ಜಿ ಜೊತೆ ಒದಗಿಸಬೇಕು. ಇಲ್ಲದಿದ್ದಲ್ಲಿ ಅಂತಹ ಅರ್ಜಿಗಳಿಗೆ ಪ್ರಾಮುಖ್ಯತೆ ನೀಡಲಾಗುವುದಿಲ್ಲ.

ಕಾರ್ಯಪಾಲಕ ಅಭಿಯಂತರು,

ಪಿ.ಆರ್.806

ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.